



Photo by B. N. Prasad Reddy

ದೈವತ್ವ

## ಈ ಸಂಚಿಕೆಯಲ್ಲಿ



ತನ್ನ ಸರ್ವಸ್ವವನ್ನೂ ಪತಿಯ ಸುಖಕ್ಕಾಗಿ ತ್ಯಾಗಮಾಡಿದ ಸಾಧ್ವಿಯೋರ್ವಳ ಜೀವ
ನವನ್ನು ನಿರೂಪಿಸುವ ಕಥಾವಸ್ತುವಿ
ನಿಂದ ಕೂಡಿದ ಸಾಮಾಜಿಕ ಚಿತ್ರ



ಗಣಪತಿ ಪಿಕ್ಚರ್ಸ್‌ರವರ

# ದೇವಕಿ (ತಮಿಳು)

ಮಾಧುರಿದೇವಿ; ಜಾನಕಿ; ಲಲಿತ; ಪದ್ಮಿನಿ; ರಾಗಿಣಿ;
ಕಮಲಾ; ಬಾಲಚಂದರ್; ನಂಬಿಯಾರ್;

ಮೈಸೂರು ಸಂಸ್ಥಾನದ ಪ್ರಮುಖ ಕೇಂದ್ರಗಳಲ್ಲಿ ಯಶಸ್ವಿಯಾಗಿ
ಕಿಕ್ಕಿರಿದ ಪ್ರೇಕ್ಷಕ ವೃಂದಕ್ಕೆ ಪ್ರದರ್ಶಿತವಾಗುತ್ತಲಿದೆ.

DISTRIBUTORS FOR MYSORE STATE, CANARA AND COORG

**TALLAM PICTURES CIRCUIT**

48, Gandhinagar, BANGALORE-2    6/30, Edward Elliots Road, MADRAS-4



# ಚಂದಮಾಮ

ಮಕ್ಕಳ ಕಥೆಯ ಮಾಸಪತ್ರಿಕೆ

## ಬಡವ

ಬಡವನು ಬಳಲಿ ದುಡಿಯುವನು
ಬದುಕನೆ ದುಡಿದು ಸವೆಸುವನು
ಕೆಲಸಕೆ ಕೂಲಿ ಪಡೆಯುವನು
ಕೂಲಿಗೆ ಕೂಳು ಗಳಿಸುವನು
ಗೋಣಿಯ ಹಾಸಿ ಮಲಗುವನು
ಬೆಳಗಿನ ಜಾವಕ್ಕೇಳುವನು
ಮಣ್ಣಿನ ಮನೆಯಲಿ ಇರುತಿಹನು
ಗಂಜಿಯ ಬೇಯಿಸಿ ಉಣ್ಣುವನು
ಬಿಸಿಲೂ ಮಳೆಗೂ ದಣಿಯುವನು
ದೇಹದಿ ಬೆವರನ್ನಿಳಿಸುವನು
ಬಾಳಿನ ಕಷ್ಟ ಸಹಿಸುವನು
ದುಡಿಸುವ ದಣಿಗೆ ಮಣಿಯುವನು
ಮಾತಿಗೆ ತಪ್ಪದ ಮಾನವನು
ದೈವಕೆ ಬೆದರಿ ಬಾಗುವನು ॥

—'ದಾಸಣ್ಣ'

ಅಕ್ಟೋಬರ್
೧೯೫೧

ಸಂಪುಟ ೨
ಸಂಚಿಕೆ ೪



# ಗಳಿಸಿದ ಪುಣ್ಯ

ಶ್ರೀ

ತುಂಗಾತೀರದ ಅಂಚಿನಲಿ
ಹಿಂದಲ್ಲಿದ್ದುದು ಘನತೆಯಲಿ
ಲಕ್ಷ ರೆಂಬೆಗಳಿಹ ವಟವೃಕ್ಷ
ಪಕ್ಷಿಗಳಾಗರವಾ ವೃಕ್ಷ.

ನೆಚ್ಚಿನ ಹಕ್ಕಿಯು ಅಲ್ಲೊಂದಿತ್ತು
ಮೆಚ್ಚಿನ ಗೂಡನು ಕಟ್ಟಿತ್ತು.
ಮೇಲ್ಗಡೆ ನೆರಳು ಕೆಳಗಡೆ ನದಿಯು
ಎಲ್ಲವು ಸಂತಸ ಕೊಡುತಿತ್ತು.

ಹೀಗಿರಲೊಂದಿನ ನೀರಲಿ ಬಿದ್ದು
ಭ್ರಮರವು ಸಂಕಟ ಪಡುತಿತ್ತು.
ನೀಗುತ ಪ್ರಾಣವ ತವಕದಲಿದ್ದು
ಆಸರೆ ಹೊಂದಲು ಅಳುತಿತ್ತು.

ವಿಫಲ ಪ್ರಯತ್ನವ ವ್ಯರ್ಥ ಪ್ರಯಾಸವ
ಅಸುವಿನ ಆಸೆಗೆ ಪಡುತಿರುವಾಗ
ಮೇಗಡೆಯಿದ್ದಾ ಹಕ್ಕಿಯು ಕಂಡಿತು.
ಹೃದಯವು ಕರಗಿತು ಹಕ್ಕಿಗೆ ಬೇಗ.

ಹಕ್ಕಿಯು ಕೂಡಲೆ ರೆಂಬೆಯ ಚೂರನು
ಕೊಕ್ಕಿನ ಮೂಲಕ ಬೀಳಿಸಿತು.
ಅದರಾಸರೆಯನು ಪಡೆಯುತಲೆದ್ದು
ಭ್ರಮರವು ಬದುಕಿ ಹಾರೋಯ್ತು.

'ಕಮಲಪ್ರಿಯ' ಮದರಾಸು
(ತೆಲಗಿನಿಂದ)

ಕೆಲದಿನ ಕಳೆದು ಬೇಸಗೆ ಬರಲು
ಛಲದಲಿ ಬೇಟೆಯನರಸುತ ಬೇಡನು
ವಿಶಾಲ ವೃಕ್ಷದ ತಳ ಸೇರಿದನು
ಪಸರಿಸಿ ದೃಷ್ಟಿಯ ನೋಡಿದನು.

ಅಲ್ಲಿಯೆ ಗೂಡಲಿ ನಿದ್ರಿಸುತಿದ್ದ
ಹಕ್ಕಿಯ ಕಂಡು ಸಂತಸ ಪಟ್ಟನು
ಕೋವಿಯ ಹಿಡಿದು ಹಕ್ಕಿಯ ಹೊಡೆದು
ಹೊಟ್ಟೆಯ ತುಂಬಲು ಗುರಿಕಟ್ಟಿದನು.

ಹೊಂದಿದ ಉಪಕೃತಿ ಮರೆಯದ ದುಂಬಿ
ರೊಂಯ್ಯನೆ ಹಾರುತ ಕೂಡಲೆ ಬಂದಿತು
ಸನೇಹಿ ಪಕ್ಷಿಯನುಳಿಸಲು ಬೇಗ
ಬೇಡನ ತೋಳಿಗೆ ಕಚ್ಚಿತು ಎರಗಿ.

ತಟ್ಟನೆ ಬಂದಾಪತ್ತನು ಕಂಡು
ಬಿಟ್ಟನು ಬೇಡನು ಕೈಗಳನು.
ಗುಂಡಿನ ಗುರಿಯು ಹಕ್ಕಿಯ ತಪ್ಪಿತು
ಕೋವಿಯು ಸೇರಿತು ನೆಲವನ್ನು.

ಹರಣವ ದಕ್ಕಿಸಿ ಹಾರಿತು ಹಕ್ಕಿ
ಸಂತಸದಿಂದಲಿ ಹಾಡಿತು ದುಂಬಿ
ಗಳಿಸಿದ ಪುಣ್ಯವು ಫಲಿಸದೆ ಪೋಗದು
ಪುಣ್ಯಕರ್ಮವೆ ಸುಜನರ ಗುರಿಯು.






ಉಪಾಧ್ಯಾಯರು ತರಗತಿಗೆ ಬಂದಾಗ ಕಡ್ಲೇಕಾಯಿ ಸಿಪ್ಪೆಯಿಂದ ಕೋಣೆಯೆಲ್ಲಾ ತುಂಬಿ ಹೋಗಿತ್ತು. ಅವರು ಉರಿದು ಬೀಳುತ್ತಾ "ಯಾರೋ ಈ ಕೆಲಸ ಮಾಡಿದ್ದು? ತೆಗೆದು ಹೊರಗೆಸೆಯಿರಿ ಈ ಕಸಾನ" ಎಂದು ಆಜ್ಞಾಪಿಸಿದರು. ಎಲ್ಲರೂ ಸೇರಿ ಸಿಪ್ಪೆ ಹೊರಗೆ ತೆಗೆದು ಹಾಕುತ್ತಿದ್ದರು. ಒಬ್ಬ ಹುಡುಗ ಮಾತ್ರ ಸುಮ್ಮನೆ ಕುಳಿತಿದ್ದ. "ಯಾಕೋ ಸುಮ್ಮ ನಿದ್ದೀಯಾ?" ಎಂದು ಕೇಳಿದರು ಮಾಸ್ತರರು. "ನಾನು ಕಡ್ಲೇಕಾಯಿ ತಿನ್ನಲಿಲ್ಲ. ಆದ್ದರಿಂದ ನಾನೇನೂ ಸಿಪ್ಪೆ ತೆಗೆಯ ಬೇಕಾಗಿಲ್ಲ" ಎಂದು ಉತ್ತರ ಹೇಳಿದ ಆ ಹುಡುಗ.

ಮಾಸ್ತರರು ನಂಬಲಿಲ್ಲ ಆ ಮಾತನ್ನು. "ಮೂಳಾ, ಸುಳ್ಳು ಹೇಳುವೆಯಾ? ತೆಗೆಯುತ್ತಿಯೋ ಇಲ್ಲವೋ?" ಎಂದು ಬೆತ್ತ ಕೈಗೆ ತೆಗೆದುಕೊಂಡರು. ಮಾಸ್ತರರು ಬೆತ್ತ ಕೈಗೆ ತೆಗೆದುಕೊಂಡರೋ ಇಲ್ಲವೋ, ಆ ಹುಡುಗ ಪುಸ್ತಕಗಳನ್ನು ತೆಗೆದುಕೊಂಡು ನೆಟ್ಟಗೆ ಮನೆಗೆ ಹೊರಟು ಬಿಟ್ಟ.

ಉಪಾಧ್ಯಾಯರು ಆ ವಿದ್ಯಾರ್ಥಿ ಮನೆಗೆ ಹೋಗಿ ಆತನ ತಂದೆಯೊಂದಿಗೆ ಈ ವಿಷಯ ಹೇಳಿದರು. ಅದಕ್ಕೆ ಅವರು "ಮಾಸ್ತರರೇ, ನಮ್ಮ ಹುಡುಗ ಸುಳ್ಳಾಡುವುದಿಲ್ಲ. ನನಗೆ ಚೆನ್ನಾಗಿ ಗೊತ್ತು. ಅದು ಮಾತ್ರವೇ ಅಲ್ಲ; ಅಂಗಡಿಯಲ್ಲಿ ಯಾವ ತಿಂಡಿಯನ್ನೂ ಕೊಂಡು ಕೊಂಡು ತಿನ್ನುವ ಸ್ವಭಾವವಲ್ಲ ಅವನದು. ಆದ್ದರಿಂದ ಅವನನ್ನು ನೀವು ಸಿಪ್ಪೆ ಎತ್ತಿ ಹಾಕು ವಂತೆ ಹೇಳಿದ್ದರಲ್ಲಿ ನ್ಯಾಯವಿಲ್ಲ" ಎಂದು ಉತ್ತರ ಹೇಳಿ ಕಳುಹಿಸಿದರು.

ಆ ಸಣ್ಣ ವಯಸ್ಸಿನಲ್ಲೇ ಸತ್ಯಕ್ಕಾಗಿ ಗುರುವಾಜ್ಞೆಯನ್ನು ಧಿಕ್ಕರಿಸಿ, ಆತ್ಮ ಗೌರವವನ್ನು ಉಳಿಸಿಕೊಂಡ ಆ ಬಾಲಕ, ಬೆಳೆದು ದೊಡ್ಡವನಾಗಿ ನಮ್ಮ ದೇಶದ ಮಹಾಸಂಸ್ಥೆಯಲ್ಲಿ ಅತ್ಯುನ್ನತ ಸ್ಥಾನವನ್ನು ಅಲಂಕರಿಸಿ, 'ಸ್ವಾತಂತ್ರ್ಯ ನನ್ನ ಜನ್ಮಸಿದ್ಧ ಹಕ್ಕು, ಅದನ್ನು ನಾನು ಸಾಧಿಸುವೆನು' ಎಂದು ಸಾರಿ ಹೇಳಿ ಆ ಮಾತನ್ನು ಅಕ್ಷರಶಃ ನೆರವೇರಿಸಿಕೊಂಡ, ಆ ಮಹಾನು ಭಾವನೇ ಭಾರತಮಾತೆಯ ಮಮತೆಯ ಪುತ್ರ ಲೋಕಮಾನ್ಯ ಬಾಲ ಗಂಗಾಧರ ತಿಲಕ್.



# ವಿನಾಯಕನ ದಯೆ

ಸೃಷ್ಟಿಗೆಮೊದಲು ಭಗವಂತನಾದ ಶ್ರೀಮಹಾ ವಿಷ್ಣು ಅವತರಿಸಿ, ಪ್ರಥಮದಲ್ಲಿ ತನ್ನ ನಾಭಿ ಕಮಲದಲ್ಲಿ ಬ್ರಹ್ಮನನ್ನು ಹೊರ ಹೊಮ್ಮಿಸಿ ದನು. ಕೂಡಲೇ "ಎಲೈ ಬ್ರಹ್ಮನೇ, ಚೆನ್ನಾಗಿ ಆಲೋಚನೆಯನ್ನು ಮಾಡಿ ನೀನು ಕೂಡಲೇ ಹದಿನಾಲ್ಕು ಭುವನಗಳನ್ನು ಏರ್ಪಾಟು ಮಾಡು. ಒಂದೊಂದು ಲೋಕದಲ್ಲಿ ವಿವಿಧ ಜೀವಕೋಟಿಯನ್ನು ಸೃಷ್ಟಿಸು" ಎಂದು ಆಜ್ಞಾಪಿಸಿದನು. ಆದರೆ ಬ್ರಹ್ಮಾಂಡವಾದ ಸೃಷ್ಟಿಕಾರ್ಯ ಮುಗಿಸಲು ಆಲೋಚನೆ ಮಾಡುವುದಕ್ಕೆ ಒಂದು ತಲೆ ಸಾಕೇ? ಆದ್ದರಿಂದ ದೀರ್ಘವಾಗಿ ಯೋಚಿಸಲೆಂದು ನಾಲ್ಕು ತಲೆ ಕೊಟ್ಟ ವಿಷ್ಣು.

ವಿಷ್ಣುವಿನ ಅಜ್ಞೆಯಂತೆ ಬ್ರಹ್ಮ ನಾಲ್ಕು ತಲೆಗಳಿಂದಲೂ ಆಲೋಚಿಸಿ ಸೃಷ್ಟಿ ಕಾರ್ಯವನ್ನು ಪ್ರಾರಂಭಿಸಿದ. ಮೊದಲು ಹದಿನಾಲ್ಕು ಲೋಕಗಳನ್ನು ನಿರ್ಮಿಸಿದ. ಯಾವಯಾವ ಲೋಕದಲ್ಲಿ ಯಾವಯಾವ ಜೀವಕೋಟಿಯಿರಬೇಕೆಂಬುದನ್ನೂ ನಿರ್ಧರಿಸಿಕೊಂಡ.

ಭೂಲೋಕದಲ್ಲಿ ಜಂತುಗಳೂ, ಪಕ್ಷಿಗಳೂ, ವೃಕ್ಷಗಳೂ, ಕ್ರಿಮಿಕೀಟಗಳೂ, ಇವುಗಳೆಲ್ಲಕಿಂತಲೂ ಮುಖ್ಯವಾಗಿ ಮಾನವ ಜಾತಿಯಿರಬೇಕೆಂದು ನಿಶ್ಚಯಿಸಿಕೊಂಡ. ಆದರೆ ಮಾನವನು ಯಾವ ಆಕಾರದಲ್ಲಿರಬೇಕು ಎಂಬ ಸಮಸ್ಯೆ ಬಂತು. ಒಂದು ಸ್ವರೂಪವನ್ನು ತನ್ನ ಮನಸ್ಸಿನಲ್ಲಿ ಊಹಿಸಿಕೊಂಡು ಮಾನವನನ್ನು ಸೃಜಿಸಲು ಸಿದ್ಧನಾದ ಬ್ರಹ್ಮ.

ಕೋಟ್ಯಾಂತರ ಮುಂಡಗಳನ್ನು ತಯಾರು ಮಾಡಿ, ಒಂದೊಂದಕ್ಕೂ ತಲೆಗಳನ್ನು ಜೋಡಿಸಿದ. ತಲೆಗೆ ಒಂದು ಮುಖ, ಮುಖದಲ್ಲಿ ಎರಡು ಕಣ್ಣು, ಮೂಗು, ಬಾಯಿ, ಎರಡು ಕಡೆಗಳಲ್ಲೂ ಎರಡು ಕಿವಿಗಳು, ಇವುಗಳೆಲ್ಲಾ ಆದಮೇಲೆ ಶರೀರಕ್ಕೆ ಹೊಟ್ಟೆ, ಬೆನ್ನು ಮೊದಲಾದ ಅವಯವಗಳನ್ನೂ, ಎರಡೆರಡು ಕಾಲು, ಕೈ, ಕೈಕಾಲುಗಳಿಗೆ ಐದೈದು ಬೆರಳುಗಳು; ಈ ರೀತಿ ತಯಾರು ಮಾಡ ಹೊರಟ.

ಆದರೆ ಬ್ರಹ್ಮ ಒಂದು ರೀತಿ ಮಾಡ ಹೋದರೆ ಮಾನವನ ಸ್ವರೂಪ ಮತ್ತೊಂದು

ಕೆ. ಪ್ರಮೀಳ, ಬೊಂಬಾಯಿ



ಇದೆಲ್ಲಾ ಕಂಡು ಬ್ರಹ್ಮನಿಗೆ ಭಯವುಂಟಾಯಿತು. ತನ್ನ ಭಾವನೆಗಳನ್ನು ಮೀರಿ ಈ ರೀತಿ ವಿಕಾರಸ್ವರೂಪಗಳು ಸಿದ್ಧವಾಗಲು ಕಾರಣವಾದರೂ ಏನಿರಬಹುದು ಎಂದು ತನ್ನ ನಾಲ್ಕು ತಲೆಗಳಿಂದ ಮತ್ತೆ ಒಂದುಸಾರಿ ತೀವ್ರವಾಗಿ ಯೋಚಿಸಿದ ಬ್ರಹ್ಮದೇವ. ಹೀಗೆ ಯೋಚಿಸುತ್ತಿರುವ ಸಮಯದಲ್ಲಿ ಆತನು ಸಿದ್ಧ ಮಾಡಿದ್ದ ಮಾನವ ಸ್ವರೂಪಗಳು ಕೆಲವು ನಕ್ಕವು. ಮತ್ತೆ ಕೆಲವು ಹಲ್ಲು ಕಿರಿದು ಅಣಕಿಸಿದವು. ಇನ್ನು ಕೆಲವಾಕೃತಿಗಳು ಹೊಡೆಯಲು ಬಂದವು. ಮಿಕ್ಕ ಕೆಲವು ಕಣ್ಣು ಗುಡ್ಡೆಗಳನ್ನೂ ಗಿರಗಿರನೆ ತಿರುಗಿಸಿ ಬ್ರಹ್ಮನನ್ನು ಭಯಪಡಿಸಿದವು. ಈ ಚೇಷ್ಟೆಗಳನ್ನು ಕಂಡು ಬ್ರಹ್ಮನಿಗೆ ತುಂಬಾ ಗಾಬರಿ ಆಯಿತು. ತಾನು ಸೃಷ್ಟಿಸಿದ ಮಾನವ ಸ್ವರೂಪಗಳೇ ಈ ರೀತಿ ತನಗೆ ಎದುರು ಬೀಳುವುದನ್ನು ಕಂಡು ಇದೆಲ್ಲಾ ಏಕೆ ನಡೆಯುತ್ತಿರುವುದೋ ತಿಳಿಯಲಾರದೆ, ಬ್ರಹ್ಮದೇವನು ಹೆದರಿಕೆಯಿಂದ ತಲೆ ಬಿಗಿದುಕೊಂಡು ಮಲಗಿಕೊಂಡ.

ವಿಧವಾಗಿ ಆಗುತಿತ್ತು. ಒಂದು ಮುಂಡ ತೆಗೆದುಕೊಂಡು ಅದಕ್ಕೆ ಬ್ರಹ್ಮ ಒಂದು ಮುಖ ವಿಡೋಣವೆಂದರೆ ಅದು ಎರಡು ಮುಖಗಳಾಗಿ ಬದಲಾಯಿಸುತಿತ್ತು. ಎರಡು ಕಣ್ಣುಗಳು ಇಟ್ಟು ಸರಿಮಾಡುವಷ್ಟರಲ್ಲಿ ಈಶ್ವರನಿಗಿರುವಂತೆ ಹಣೆಯಲ್ಲಿ ಮೂರನೇ ನೇತ್ರ ಬೆಳೆಯುತ್ತಿತ್ತು. ಎರಡು ಕಡೆಯೂ ಒಂದೊಂದು ಕೈ ಜೋಡಿಸಬೇಕೆಂದಿದ್ದರೆ, ಆ ಎರಡು ಕೈಗಳಿಗೆ ಮತ್ತೆರಡು ಕೈಗಳು ಬಂದು ಅಂಟಿ ಕೊಳ್ಳುತ್ತಿದ್ದವು. ಸರಿಯಾಗಿ ಎಣಿಸಿ ಎರಡೇ ಕಾಲುಗಳು ಇಡ ಹೋಗುವನು. ಕಾಲುಗಳನ್ನು ತಯಾರು ಮಾಡಿ ಇಟ್ಟಿದ್ದ ಎಳೆಯಿಂದ ಮತ್ತೆ ಮೂರು ಕಾಲು ಬಂದು, ಅವು ಒಟ್ಟು ಐದು ಕಾಲುಗಳಾಗುತ್ತಿದ್ದವು.

ಈ ರೀತಿ ವಿಚಾರಮಗ್ನನಾಗಿ ಮಲಗಿದ ಬ್ರಹ್ಮನಿಗೆ ಬವಳಿ ಬಂದಂತೆ ಆಗಿ, ಒಂದು ಜೊಂಪು ಹಿಡಿಯಿತು. ಆ ನಿದ್ದೆಯಲ್ಲಿ ಒಂದು ಕನಸಾಯಿತು. ಆತನೆದುರಾಗಿ ಮಹಾ ಸಮುದ್ರದಲ್ಲಿ ಅಲೆಗಳು ಒಂದಕ್ಕೊಂದು ಬಡಿಯುತ್ತಾ ಶಬ್ದ ಮಾಡುತ್ತಿತ್ತು. ಆ ಅಲೆಗಳಮೇಲೆ ಸಣ್ಣ ಆಲದ ಎಲೆ ಕಾಣಿಸಿತು. ಇದೇನು ವಿಚಿತ್ರವಪ್ಪಾ ಅಂತ ಆ ಎಲೆಯಕಡೆ

ನೋಡುತ್ತಿರುವಲ್ಲಿ ಅದು ತನ್ನ ಹತ್ತಿರಕ್ಕೆ ಬಂದು ಅದರಮೇಲೆ ಶಿಶು ರೂಪದಲ್ಲಿದ್ದ ವಿನಾಯಕನ ಸ್ವರೂಪ ಕಾಣಬಂತು.

ಆಗ ಬ್ರಹ್ಮದೇವನು "ಅಯ್ಯೋ ಎಂತಹ ಹುಚ್ಚು ಕೆಲಸ ಮಾಡಿದೆ. ಸಮಸ್ತ ವಿಘ್ನಗಳನ್ನೂ ನಾಶ ಮಾಡುವಂತಹ ಆ ದೇವದೇವನನ್ನು ಮೊದಲು ಸ್ಮರಿಸದೆ ಈ ಸೃಷ್ಟಿಕಾರ್ಯವನ್ನು ಪ್ರಾರಂಭಿಸಿದೆ. ಆದುದರಿಂದಲೇ ಈ ರೀತಿ ಅವಸ್ಥೆಗಳುಂಟಾದವು. ಈಗಲಾದರೂ ಮಾಡಿದ ತಪ್ಪನ್ನು ಸರಿಮಾಡಿಕೊಳ್ಳುವಂತೆ ಹೇಳಲೋಸುಗವೇ ಆ ದಯಾಮಯನಾದ ಪರಮಾತ್ಮನು ಈ ರೂಪದಿಂದ ನನಗೆ ದರ್ಶನ ಕೊಟ್ಟಿರುವನು" ಎಂದು ಗ್ರಹಿಸಿ, ಕೂಡಲೇ ಎದ್ದು ಸಾಗರ ಮಧ್ಯಕ್ಕೆ ನಡೆದ.

ಅಲ್ಲಿ ಬ್ರಹ್ಮ ತದೇಕ ದೀಕ್ಷೆಯಿಂದ ತಪಸ್ಸು ಮಾಡಲು, ಸ್ವಲ್ಪ ಹೊತ್ತಿಗೆಲ್ಲಾ ನಿಜವಾಗಿ ಒಂದು ಆಲದ ಎಲೆ ಆತನ ಸಮೀಪಕ್ಕೆ ಬಂತು. ಅದು ಕನಸಿನಲ್ಲಿ ಕಾಣಿಸಿದಂತಹ ಎಲೆಯಂತೆಯೇ ಕಾಣಬರಲು ರೆಪ್ಪೆ ಬಡಿಯದೆ ಬ್ರಹ್ಮ ಅದರಕಡೆ ನೋಡುತ್ತಿದ್ದ. ಅದರ ಮೇಲೆ ವಟಪತ್ರಶಾಯಿ ಆದ ಬಾಲ ವಿನಾಯಕನ ದಿವ್ಯಮಂಗಳ ವಿಗ್ರಹವು ಸ್ಪಷ್ಟವಾಗಿ ಗೋಚರಿಸಿತು.

ಆಗ ಬ್ರಹ್ಮನು ಆನಂದಭರಿತನಾಗಿ ತುಂಬಿದ ಮನಸ್ಸಿನಿಂದ ಆ ಬಾಲ ವಿನಾಯಕನಿಗೆ ನಮಸ್ಕಾರ ಮಾಡಿ ಅನೇಕ ವಿಧದಲ್ಲಿ ಪ್ರಾರ್ಥನೆ ಮಾಡಿದ. "ದೇವಾ, ಮೊತ್ತ



ಮೊದಲು ನಿನ್ನನ್ನು ಪೂಜಿಸದೆ ಸೃಷ್ಟಿಕಾರ್ಯವನ್ನು ಪ್ರಾರಂಭಿಸಿದೆನಾದ್ದರಿಂದ ನಾನಾ ಅವಸ್ಥೆಗಳುಂಟಾದವು. ನನ್ನ ತಪ್ಪನ್ನು ಈಗ ಅರಿತು ಕೊಂಡೆ. ಆದುದರಿಂದ ನನ್ನ ತಪ್ಪನ್ನು ಮನ್ನಿಸಿ, ಇನ್ನುಮುಂದೆ ಯಾವುದೇ ವಿಧವಾದ ವಿಘ್ನವುಂಟಾಗದೆ ಸೃಷ್ಟಿಕಾರ್ಯ ಮುಗಿಯುವಂತೆ ಅನುಗ್ರಹಿಸು" ಎಂದು ನಾನಾ ವಿಧವಾಗಿ ಪ್ರಾರ್ಥಿಸಿದ.

ಆಗ ವಟಪತ್ರಶಾಯಿಯಾದ ವಿಘ್ನೇಶ್ವರನು ಕಿರುನಗೆಬೀರುತ್ತಾ, ಒಂದು ಸಾರಿ ಸೊಂಡಿಲನ್ನು ಅತ್ತಿತ್ತ ಆಡಿಸಿ "ಎಲೈ ಬ್ರಹ್ಮ, ನೀನಾದರೂ, ನಾನಾದರೂ ನಿರ್ವಹಿಸಬೇಕಾದುದು ಸೃಷ್ಟಿಕಾರ್ಯವೇ ಅಲ್ಲವೇ? ಸೃಷ್ಟಿಸುವುದು ನಿನ್ನ ಕೆಲಸ. ಅದನ್ನು ವ್ಯವಸ್ಥೆ

ಮಾಡುವುದು ನನ್ನ ಕಾರ್ಯ. ನಾನಿರುವಾಗ ನಿನಗೇತರ ಭಯ? ಇದೋ, ನಿನಗೆ ನಾನು ಈಗ ಓಂಕಾರ ಮಂತ್ರವನ್ನು ಉಪದೇಶ ಮಾಡುತ್ತಿರುವೆನು. ಇದನ್ನು ಜಪಮಾಡಿ ಮತ್ತೆ ಸೃಷ್ಟಿಕಾರ್ಯ ಪ್ರಾರಂಭಿಸು. ಈಸಾರಿ ನಿನ್ನ ಕಾರ್ಯ ನಿರ್ವಿಘ್ನವಾಗಿ ಸಾಗುವುದು'' ಎಂದು ಹೇಳಿ ಅದೃಶ್ಯನಾದ.

ವಿನಾಯಕನ ಆಣತಿಯಂತೆ ತಕ್ಷಣವೇ ಬ್ರಹ್ಮದೇವನು ಓಂಕಾರ ಮಂತ್ರ ಜಪಿಸಿ, ಜಪ ಪೂರ್ತಿಯಾದ ಮೇಲೆ ಸೃಷ್ಟಿಕಾರ್ಯ ಷುರುಮಾಡಿದ. ಈಗ ಯಾವುದೇ ವಿಧವಾದ ತೊಂದರೆಯೂ ಇಲ್ಲದೆ ನೆನೆಸಿದಂತೆ ಕಾರ್ಯ ನಡೆಯುತ್ತಿತ್ತು. ಇದೆಲ್ಲವೂ ವಿನಾಯಕನ ಕಟಾಕ್ಷವೇ ಎಂದುಕೊಂಡು ಬ್ರಹ್ಮ ಪ್ರತಿದಿನ ಆ ದೇವದೇವನನ್ನು ನೆನೆಸಿಕೊಂಡು ಕೆಲಸಕ್ಕೆ ಪ್ರಾರಂಭಿಸುವನು. ಬ್ರಹ್ಮದೇವನೇ ಅಲ್ಲದೆ ಆತನಿಂದ ಸೃಷ್ಟಿ ಮಾಡಲ್ಪಟ್ಟ ದೇವಗಣವೂ, ಹದಿನಾಲ್ಕು ಲೋಕಗಳಲ್ಲಿರುವ ಸಮಸ್ತ ಪ್ರಾಣಿಕೋಟಿಯೂ ಮೊದಲು ಗಣಪತಿಯನ್ನು ನೆನೆಸಿ, ಮುಂದಿನ ಕಾರ್ಯಕ್ಕೆ ಕೈ ಹಾಕುತ್ತಿದ್ದರು. ಆಗ ಯಾವ ವಿಘ್ನವೂ ಬರುತ್ತಿರಲಿಲ್ಲ. ಈ ರೀತಿ ಬ್ರಹ್ಮದೇವನುಃಥವನೇ ವಿನಾಯಕನ ದಯೆ ಸಂಪಾದಿಸಿದ ಹೊರತು ಸೃಷ್ಟಿಕಾರ್ಯ ಮಾಡಲಾಗಲಿಲ್ಲವೆಂದಮೇಲೆ ಆ ಆದಿದೇವನನ್ನು ಮಾನವ ಮಾತ್ರರು ಸೇವೆ ಮಾಡಬೇಕಾದ ಅಗತ್ಯವೆಷ್ಟಿದೆ ಎಂಬುದನ್ನು ಬೇರೆ ಹೇಳಬೇಕೆ.

ಆದ್ದರಿಂದಲೇ ವಿಘ್ನೇಶ್ವರನು ಅವತರಿಸಿದ ಭಾದ್ರಪದ ಶುದ್ಧ ಚತುರ್ದಶಿ ಒಂದು ಸುದಿನವೆಂದು ಎಣಿಸಿ, ಪ್ರತಿ ವರ್ಷ ಹಿಂದೂಗಳೆಲ್ಲರೂ ಆದಿ ದೇವನನ್ನು ವಿಜೃಂಭಣೆಯಿಂದ ಪೂಜಿಸುವರು. ವಿನಾಯಕನ ದಯೆ ಸಂಪಾದಿಸಿಕೊಂಡವರು, ಏನು ಕೋರಿಕೊಂಡರೂ ಆ ಅಭಿಲಾಷೆಗಳನ್ನು ಈಡೇರಿಸುವನೆಂದು ಪ್ರಜೆಗಳ ನಂಬಿಕೆ.

ಇಂತಹ ಮಹಿಮೆಯುಳ್ಳ ವಿನಾಯಕನನ್ನು ಹಿಂದೂಗಳೇ ಅಲ್ಲ, ಇತರ ದೇಶಗಳವರೂ ಸಹ ಪೂರ್ವಕಾಲದಲ್ಲಿ ಆರಾಧಿಸಿ ಸುಖ ಪಡೆಯುತ್ತಿದ್ದರೆಂಬುದಕ್ಕೆ ಸಾಕಷ್ಟು ನಿದರ್ಶನಗಳಿವೆ.






## 15

[ಗಡ್ಡದವನಿಂದ ಅವಳಿ ಸಹೋದರರ ಜನ್ಮರಹಸ್ಯ ಕೇಳಿದ ರಾಕ್ಷಸನು, ಸಂತೋಷ ಗೊಂಡ. ಆತನು ತನ್ನ ಬಲಿಗೆ ಬೇಕಾದ ಏರ್ಪಾಟುಗಳನ್ನು ಮಾಡಲು ಹೋದಾಗ ರಾಜ ಕುಮಾರಿಯರು ಅಂಗವಿಕಲರಾಗುವುದೂ, ಅದನ್ನು ನೋಡಿ ಉಗ್ರನಾಗಿ ಗಡ್ಡದವನನ್ನೂ ಸಂಧ್ಯಾ ನಿಶೀಥರನ್ನೂ ಪಾತಾಳ ಭವನದಲ್ಲಿ ಬಂಧಿಸುವುದೂ, ಕೊಳದ ಸುತ್ತಲೂ ಕಟ್ಟುನಿಟ್ಟಾದ ಕಾವಲು ಏರ್ಪಾಟು ಮಾಡಿ ರೂಪ ಗೆಟ್ಟ ರಾಜಕುಮಾರಿಯರೊಂದಿಗೆ ಹಾರಿ ಹೋದುದನ್ನು ಓದಿದಿರಿ. ಅನಂತರ!

ಉದಯನನು ಆ ರೀತಿ ಅದೃಶ್ಯರೂಪದಲ್ಲೇ ಇದ್ದು ಮುಂದೇನುಗತಿ ಎಂದು ತೀವ್ರವಾಗಿ ಆಲೋಚನೆ ಮಾಡತೊಡಗಿದನು. ಪಾತಾಳ ಭವನದೊಳಕ್ಕೆ ಹೋಗೋಣವೆಂದರೆ ಭಸ್ಮ ಮತ್ತು ಅಂಜನಗಳು ಅಲ್ಲಿ ಕೆಲಸಮಾಡಲಾರವೆಂದು ಈ ಮೊದಲೇ ರಾಜಕುಮಾರಿಯರು ಹೇಳಿರುವರು. ಆದರೂ ಒಂದು ಕೈ ನೋಡೋಣವೆಂದು ಕುತೂಹಲದಿಂದ ಉದಯನನು ಹೋಗಿ ಆ ಎಲೆಗಳ ಗುಡ್ಡೆಯನ್ನು ಒಂದುಕಡೆ ತಳ್ಳಿಹಾಕಿದ. ಆಗ ಅಲ್ಲೊಂದು ಸುರಂಗವೇರ್ಪಟ್ಟು ಅದರಲ್ಲಿ ಮೆಟ್ಟಿಲುಗಳು ಕಾಣಬಂದವು. ಒಂದೊಂದೇ ಮೆಟ್ಟಿಲನ್ನು ನಿಧಾನವಾಗಿ ಇಳಿಯುತ್ತಾ ಹೋದ. ಹತ್ತು ಮೆಟ್ಟಿಲುಗಳು ಇಳಿಯುವಷ್ಟರಲ್ಲಿ ಅದೃಶ್ಯ ರೂಪವು ತೊಲಗಿ ಆತನಿಗೆ ಮಾಮೂಲು ರೂಪ ಬಂದುಬಿಟ್ಟಿತು. ಆದರೆ ಉದಯನನು ಹೆದರಿ ಅಷ್ಟಕ್ಕೇ ನಿಲ್ಲಲಿಲ್ಲ. ಮತ್ತೊಂದು ಹತ್ತು ಮೆಟ್ಟಿಲು ಇಳಿದ. ಅಷ್ಟೇ. ಇನ್ನೊಂದು ಹೆಜ್ಜೆ ಮುಂದಕ್ಕಿಡಲು ಆಗಲಿಲ್ಲ. ಮೆಟ್ಟಿಲು ಕೆಳಗೆ ಭಯಂಕರವಾದ ಎರಡು ಸಿಂಹಗಳಿದ್ದವು. ಅವುಗಳಿಗಿಂತಲೂ ಭೀಕರವಾದ ಸರ್ಪಗಳು ಅವುಗಳ ಕೊರಳನ್ನು ಸುತ್ತಿ



ಕೊಂಡು ಬುಸಗುಟ್ಟುತ್ತಿದ್ದುವು. ಅವು ಕಣ್ಣಿಗೆ ಬಿದ್ದಕೂಡಲೇ ಉದಯನನು ಕ್ಷಣವಾದರೂ ಅಲ್ಲಿ ನಿಲ್ಲಲಿಲ್ಲ. ಒಂದೇ ಹಾರಿಗೆ ಹಾರಿ ಸುರಂಗದ ಹೊರಗೆ ಬಂದು ಮತ್ತೆ ಅದೃಶ್ಯ ರೂಪ ಪಡೆದನು

ಅಲ್ಲಿಂದ ಉದಯನನು ಕೊಳದ ಕತ್ತಿರಕ್ಕೆ ಬಂದ. ಕೊಳದ ಸುತ್ತಲೂ ಅಗ್ನಿಕುಂಡಗಳು ಭಗಿಲ್ ಭಗಿಲೆಂದು ಉರಿಯುತ್ತಿದ್ದುವು. ರಾಕ್ಷಸನ ಪರಿವಾರ ಜಾಗರೂಕತೆಯಿಂದ ಕಾವಲು ಕಾಯುತ್ತಿದ್ದರು. ಅಂಗವಿಕಲರಾದ ರಾಜಕುಮಾರಿಯರನ್ನು ರಾಕ್ಷಸನು ಎತ್ತಿಕೊಂಡು ಹೋದ ವಿಷಯ ಉದಯನನಿಗೆ ತಿಳಿಯದು. ಆದರೆ ಒಂದು ಸಾರಿ ಲೆಕ್ಕ ಮಾಡಿ ನೋಡಲು ಕೊಳದಲ್ಲಿ ನಲವತ್ತೆಂಟು ಹಂಸಗಳಿಗೆ ಬದಲಾಗಿ ಈಗ ನಲವತ್ತೈದು ಮಾತ್ರ ಇರುವುದನ್ನು ಕಂಡು ಸಂಶಯಗ್ರಸ್ತನಾದ. ಕಡಿಮೆಯಾಗಿರುವ ಆ ಮೂರು ಜನರೂ ನಮ್ಮ ರಾಜಕುಮಾರಿಯರೇ ಎಂದೂ, ಅವರಿಗೆ ಯಾವುದೋ ಪ್ರಮಾದ ಸಂಭವಿಸಿರಬೇಕೆಂದೂ ತಿಳಿದುಕೊಂಡ. ಆದರೆ ಮಾಡುವುದೇನಿದೆ? ಯಾರನ್ನು ಕೇಳಿದರೆ ನಿಜಾಂಶ ತಿಳಿಯುವುದು? ಅದೃಶ್ಯ ರೂಪವನ್ನು ತೊರೆದು ಮಾನವರೂಪದಲ್ಲಿ ಮನುಷ್ಯನಾಗಿ ಕಾಣಿಸಿದರೆ ರಾಕ್ಷಸನ ಪರಿವಾರ ತನ್ನನ್ನು ಹಿಡಿದು ಬಿಡುವರು. ಯಾವುದೋ ಒಂದು ರೀತಿ ಕೊಳವನ್ನು ಸೇರಿ, ಹಂಸರೂಪವನ್ನು ಪಡೆಯೋಣವೆಂದರೆ ಕೊಳದ ಸುತ್ತ ಅಗ್ನಿಜ್ವಾಲೆಗಳು ಉರಿಯುತ್ತಿವೆ. ಇಷ್ಟು ಮಾತ್ರಕ್ಕೆ ಉದಯನನು ನಿರಾಶೆ ಪಡುವನೇ? ಈ ವಿಷಯ ಹಾಗಿರಲಿ.

ರಾಕ್ಷಸನು ಹೊತ್ತುಕೊಂಡು ಹೋದ ಆ ರಾಜಕುಮಾರಿಯರ ಗತಿ ಏನಾಯಿತು ಗೊತ್ತೇ? ಅವನು ಅವರನ್ನು ಒಂದು ಮಹಾರಣ್ಯದಲ್ಲಿ ಬಿಟ್ಟುಬಿಟ್ಟನು ಸುಮ್ಮನೆ ಅವರನ್ನು ಹಾಗೇ ಬಿಟ್ಟುಬಿಟ್ಟದ್ದರೆ ಚೆನ್ನಾಗಿರುತಿತ್ತು. ಎಲ್ಲಿ ತನ್ನ ಮಾಯಾಭವನದ ರಹಸ್ಯ ಬಯಲು ಮಾಡುವರೋ ಎಂಬ ಭೀತಿಯಿಂದ ಅವರನ್ನು ಮೂಕರನ್ನಾಗಿ ಮಾಡಿ, ತನ್ನ ಹಾದಿ ತಾನು ಹಿಡಿದನು. ಮೊದಲೇ ಅಂಗವಿಕಲರಾಗಿದ್ದ ಆ ರಾಜಕುಮಾರಿಯರು ಈ ಮೂಕತನವೂ ಪ್ರಾಪ್ತವಾದುದರಿಂದ ತಲ್ಲಣಿಸಿ ಹೋದರು. ಹೇಗೋ ಕಷ್ಟಪಟ್ಟು ಆ ಅರಣ್ಯಮಧ್ಯದಿಂದ

ಹೊರಬೀಳೋಣವೆಂದರೆ ಕಾಲು ಕಳೆದು ಕೊಂಡ ಸುಭಾಷಿಣಿ, ಕಣ್ಣು ಕಳೆದುಕೊಂಡ ಸುಕೇಶಿನಿಯರೊಂದಿಗೆ ಸಾಗಲು ಸುಹಾಸಿನಿ ಒಬ್ಬಳಿಂದಲೇ ಸಾಧ್ಯವೇ?



ಅದೃಷ್ಟವಶಾತ್ ಒಂದು ದಿನ ಆ ಅಡವಿಗೆ ಒಬ್ಬ ರಾಜ ಬೇಟೆಗಾಗಿ ಬಂದನು. ರಾಜ ಕುಮಾರಿಯರನ್ನು ನೋಡಿದನು. ಅಪರೂಪ ಸುಂದರಿಯರಾದ ಆ ಹುಡುಗಿಯರಿಗೆ ಈ ರೀತಿ ಅಂಗ ವಿಕಲತೆಯುಂಟಾಗಿರುವುದನ್ನು ಗಮನಿಸಿ, ಆತ ಆಶ್ಚರ್ಯಗೊಂಡ. "ಯಾರು ನೀವು? ಏಕೆ ಈ ಅರಣ್ಯಮಧ್ಯದಲ್ಲಿ ಸಂಚರಿಸುತ್ತಿರುವಿರಿ?" ಎಂದು ಪ್ರಶ್ನೆಮಾಡಿದನು.

ಆದರೆ ರಾಜಕುಮಾರಿಯರು ಉತ್ತರ ಹೇಳಲಾರದೆ ಸಂಜ್ಞೆಗಳಿಂದ ತಿಳಿಸಲು ಪ್ರಯತ್ನಿಸಿದರು. ಅವರ ಅವಸ್ಥೆ ನೋಡಿ ರಾಜನು "ಅಯ್ಯೋ ಪಾಪ. ಮೂಕತನ ಬೇರೆಯೇ?' ಎಂದು ಮರುಕಗೊಂಡನು. "ನೋಡಿದರೆ ನೀವು ಮೂವರೂ ಗೌರವಸ್ಥ ಕುಟುಂಬಕ್ಕೆ ಸೇರಿದವರಂತೆ ಕಾಣುವಿರಿ. ಯಾವುದೋ ಮಹತ್ತರ ಕಾರಣದಿಂದ ನೀವು ಈ ದುಸ್ಥಿತಿಯಲ್ಲಿರುವಿರಿ. ನಿಮಗೇನೂ ಭಯವಿಲ್ಲ. ನನ್ನೊಂದಿಗೆ ಬನ್ನಿ. ನಿಮ್ಮ ಮನೆಯಲ್ಲಿ ಎಷ್ಟು ಸ್ವೇಚ್ಛೆಯಾಗಿರುತ್ತಿದ್ದರೋ ಅಷ್ಟೇ ಸ್ವತಂತ್ರರಾಗಿ ನೀವು ನನ್ನ ಅರಮನೆಯಲ್ಲಿರಬಹುದು. ನಾನು ಮಾಳವದೇಶದ ಮಹಾರಾಜ. ನನ್ನ ಹೆಸರು ಪ್ರತಾಪಸಿಂಹ. ಈ ಹೆಸರನ್ನು ನೀವು ಕೇಳಿರಬಹುದು" ಎಂದು ಅವರಿಗೆ ನಂಬಿಕೆಯುಂಟಾಗುವಂತೆ ಧೈರ್ಯ ಹೇಳಿದನು.

ಇದನ್ನು ಕೇಳಿದಕೂಡಲೇ ಕಷ್ಟಗಳನ್ನು ಅನುಭವಿಸುತ್ತಿದ್ದ ರಾಜಕುಮಾರಿಯರ ವದನಗಳು ವಿಕಸಿತಗೊಂಡವು. ಒಮ್ಮೆಗೇ ನಾಚಿಕೆಯಿಂದ ಅವರು ತಲೆ ತಗ್ಗಿಸಿದರು. ಅವರ ಮೌನವೇ ಅಂಗೀಕಾರವೆಂದು ತಿಳಿದು ಪ್ರತಾಪಸಿಂಹನು ಅವರನ್ನು ಕುದುರೆಯ ಮೇಲೆ ಕೂರಿಸಿ ತಾನು ಮಾತ್ರ ಪಾದಚಾರಿಯಾಗಿ ಹೊರಟನು.

ಸ್ವಲ್ಪ ಸಮಯಾನಂತರ ಸುಹಾಸಿನಿ, ಸುಭಾಷಿಣಿ, ಸುಕೇಶಿನಿಯರೊಂದಿಗೆ ಮಹಾರಾಜ ತನ್ನ ಅರಮನೆ ಸೇರಿಕೊಂಡ. ಕೂಡಲೇ ಆಸ್ಥಾನವಿದ್ವಾಂಸನನ್ನು ಕರೆಯಿಸಿ, ರಾಜಕುಮಾರಿಯರ ವೃತ್ತಾಂತ ತಿಳಿಯುವ

ಮಾರ್ಗ ಯಾವುದಾದರೂ ಇದೆಯೇನೋ ಆಲೋಚಿಸುವಂತೆ ಆಜ್ಞಾಪಿಸಿದ.

ಆಸ್ಥಾನ ವಿದ್ವಾಂಸ ತನ್ನ ಬುದ್ಧಿ ಚಾತುರ್ಯವನ್ನೆಲ್ಲಾ ಖರ್ಚುಮಾಡಿ ಒಂದು ಉಪಾಯ ಮಾಡಿದನು. ಮೂವರು ರಾಜ ಕುಮಾರಿಯರನ್ನು ಒಂದೆಡೆ ಕೂರಿಸಿದ. ಸ್ವಲ್ಪ ಮರಳು ತಂದು ಅವರ ಮುಂದೆ ಹಾಕಿ ಹರಡಿಸಿದ. ಸುಹಾಸಿನಿಕಡೆ ನೋಡಿದ. ಸುಹಾಸಿನಿ ಕಣ್ಣೀರು ಸುರಿಸುತ್ತಾ 'ಓದಿಕೊಂಡವರಲ್ಲ ನಾವು' ಎಂಬರ್ಥ ಬರುವಂತೆ ಸಂಜ್ಞೆ ಮಾಡಿದಳು.

ತಾನು ಯಾವುದೋ ಭಾರಿ ಆಲೋಚನೆ ಮಾಡಿದೆನೆಂದು ಕೊಂಡಿದ್ದ ಆಸ್ಥಾನ ವಿದ್ವಾಂಸನು ಸುಹಾಸಿನಿ ಈ ರೀತಿ ಸಂಜ್ಞೆ ಮಾಡಿದ ಕೂಡಲೇ ತಲೆಬಾಗಿಸಿದನು.

"ಮಹಾರಾಜ, ನನ್ನ ಬುದ್ಧಿಗೆ ಹೊಳೆದ ಉಪಾಯವೆಲ್ಲವನ್ನೂ ಪ್ರಯತ್ನಿಸಿದೆ. ಆದರೆ ಏನೂ ಸಾಗದಾಯಿತು. ಇದಕ್ಕಿಂತಲೂ ಬೇರೊಂದು ಮಾರ್ಗ ಕಾಣಿಸದು" ಎಂದು ಆಸ್ಥಾನ ವಿದ್ವಾಂಸ ತನ್ನ ಅಸಾಮರ್ಥ್ಯಕ್ಕೆ ನಾಚಿಕೆ ಪಡುತ್ತಾ ಬಿನ್ನವಿಸಿಕೊಂಡನು.

"ಸರಿ" ಎಂದು ಆತನನ್ನು ಕಳುಹಿಸಿಬಿಟ್ಟ ಮಹಾರಾಜ. ಕೂಡಲೇ ದಾಸಿಯರನ್ನು ಕರೆದು "ಈ ಮೂವರಿಗೂ ಯಾವುದೇ ಲೋಪವು ಬರದಂತೆ ಅತಿ ಜಾಗರೂಕತೆಯಿಂದ ಕಾಪಾಡುತ್ತಿರಿ. ಅಂತಃಪುರದಲ್ಲೇ



ಇಟ್ಟು ಕಣ್ಣು ರೆಪ್ಪೆಯಂತೆ ಹುಷಾರಾಗಿ ನೋಡುತ್ತಿರಿ" ಎಂದು ಆಜ್ಞಾಪಿಸಿದ.

ಸುಹಾಸಿನಿ, ಸುಭಾಷಿಣಿ, ಸುಕೇಶಿನಿಯರು ಏನೊಂದೂ ಕಷ್ಟವಿಲ್ಲದೆ ಅರಮನೆಯಲ್ಲಿದ್ದರು.

* * *

ಉದಯನನು ಹಿಂದಿನಸಾರಿ ಶ್ರಾವಸ್ತಿಗೆ ಹೋಗುವಾಗ ಒಂದು ರಾಜ್ಯದ ಮಧ್ಯೆ ಹೋಗುವುದು, ಅಲ್ಲೊಬ್ಬ ಅಂಧನಿಗೆ ದೃಷ್ಟಿ ಲಭಿಸುವಂತೆ ಮಾಡಿದ್ದೂ, ಅದನ್ನು ಕಂಡು ಆ ದೇಶದ ರಾಜನು ಆತನನ್ನು ತನ್ನ ಹತ್ತಿರವೇ ಇರುವಂತೆ ಹೇಳುವುದೂ ನಡೆಯಿತಷ್ಟೇ. ಈಗ ರಾಜಕುಮಾರಿಯರನ್ನು ಅಡವಿಯಲ್ಲಿ ಸಂಧಿಸಿ, ಅವರನ್ನು ತನ್ನ ಅರಮನೆಯಲ್ಲಿ ಕರೆ ತಂದು ಇಟ್ಟುಕೊಂಡಿರುವ ಆ ರಾಜನೇ ಈ ಪ್ರತಾಪ.

ಮಾತು ಕೊಟ್ಟಂತೆ ಉದಯನನು ತನ್ನ ಹತ್ತಿರಕ್ಕೆ ಮತ್ತೆ ಬರುವನೆಂತಲೂ, ಆಗ ಆತನ ಸಹಾಯದಿಂದ ಈ ಮೂವರ ಅಂಗ ವೈಕಲ್ಯವನ್ನು ಸರಿಪಡಿಸಬಹುದೆಂತಲೂ, ರಾಜಕುಮಾರಿಯರನ್ನು ಕಂಡಾಕ್ಷಣ ರಾಜ ನೆಂದುಕೊಂಡನು.

ಮತ್ತೊಂದು ವಾರಕ್ಕೆಲ್ಲಾ ಉದಯನ ಪ್ರತಾಪನೆಡೆಗೆ ಬಂದನು. ಅನಿರೀಕ್ಷಿತವಾಗಿ ಉದಯನನು ಬಂದುದನ್ನು ಕಂಡು, ಮಹಾ ರಾಜನಿಗೆ ಪರಮಾನಂದವಾಯಿತು. ಹಿಂದೆ ವಾಗ್ದಾನ ಮಾಡಿದಂತೆ ಉದಯನನು ತನ್ನ



ಆಸ್ಥಾನದಲ್ಲಿ ನಿಲ್ಲಲು ಬಂದನೆಂದು ಭಾವಿಸಿದ ಆತ.

"ಮಿತ್ರನೇ ನೀನು ಯಾವಾಗ ಬರುವೆಯೋ ಎಂದು ಕಾದುಕೊಂಡಿದ್ದೆ. ಈಗಲಾದರೂ ನೀನು ಬಂದೆಯಲ್ಲಾ, ತುಂಬಾ ಸಂತೋಷವಾಯಿತು. ಹೋದ ಕೆಲಸ ನೆರವೇರಿತೇ?" ಎಂದು ಆತನನ್ನು ಆದರಾಭಿಮಾನಗಳಿಂದ ಎದುರುಗೊಂಡು, ಉಚಿತರೀತಿ ಸತ್ಕಾರ ಮಾಡಿದನು.

ಅದಕ್ಕೆ ಉದಯನನು "ನಾನು ಕೈಹಾಕಿದ ಕಾರ್ಯವಿನ್ನೂ ಪೂರ್ತಿಯಾಗಿಲ್ಲ. ಅದಕ್ಕೆ ತಮ್ಮ ಸಹಾಯಬೇಕಾಗಿದೆ" ಎಂದನು.

"ಏನು? ನನ್ನ ಸಹಾಯವೇ? ಏನದು? ಸಂಕೋಚ ಪಡಬೇಡ. ನನ್ನಿಂದ ಏನು




ಕೆಲಸ ಬೇಕಾದರೂ ನೀನು ಮಾಡಿಸಿಕೊಳ್ಳ ಬಹುದು" ಎಂದ ಮಹಾರಾಜ.

ಆಗ ಉದಯನನು ತನ್ನ ಜೀವನ ರಹಸ್ಯ ವನ್ನು ಬಯಲು ಮಾಡಿ, ತಾನು ಅವಳ ಸಹೋದರಿಯನ್ನು ಹುಡಿಕಿಕೊಂಡು ಹೊರ ಟಾಗಲಿಂದ ಅಂದಿನವರೆವಿಗೂ ನಡೆದುದ ನ್ನೆಲ್ಲಾ ವಿವರಿಸಿದ. ತನ್ನ ಹತ್ತಿರವಿರುವ ಅಂಜನಗಳೂ, ಭಸ್ಮಗಳೂ, ಅವುಗಳ ಮಹಿಮೆ ಸಹ ಮರೆಮಾಚದೆ ಹೇಳಿದ.

ಶ್ರದ್ಧೆಯಿಂದ ಕೇಳಿದ ಮಹಾರಾಜ "ಹಾಗಾದರೆ ನಾನೀಗ ಮಾಡಬೇಕಾದು ದೇನು?" ಎಂದು ಕೇಳಿದನು.

ಅದಕ್ಕೆ ಉದಯನನು "ತಮ್ಮ ಆಸ್ಥಾನ ಚಿತ್ರಕಾರನನ್ನು ಒಂದು ಸಾರಿ ನನ್ನೊಂದಿಗೆ ಕಳುಹಿಸಿಕೊಡಬೇಕು. ಒಂದು ವಾರದಲ್ಲಿ ಬಂದು ಬಿಡುತ್ತೇವೆ" ಎಂದನು.

ಸರಿ ಅಂತ ಒಪ್ಪಿಕೊಂಡ ರಾಜ. ಮರು ದಿನವೇ ಚಿತ್ರಕಾರನನ್ನು ಸಂಗಡ ಕರೆದು ಕೊಂಡು ಉದಯನನು ರಾಕ್ಷಸನ ಭವನ ವನ್ನು ಸೇರಿಕೊಂಡ. ತನ್ನ ಮೇಲೂ, ಚಿತ್ರ ಕಾರನ ಮೇಲೂ ಭಸ್ಮವನ್ನು ಎರಚಿದ. ಇಬ್ಬರೂ ಅದೃಶ್ಯ ರೂಪವನ್ನು ಹೊಂದಿದರು. ಆದಿನವೆಲ್ಲಾ ಅವರು ಕೊಳದ ದಡದಲ್ಲಿದ್ದು ಮರುದಿನವೇ ಮಾಳವರಾಜ್ಯಕ್ಕೆ ಹೊರಟರು.

ಒಂದು ವಾರಕ್ಕೆಲ್ಲಾ ಅವರು ರಾಜನ ಅರ ಮನೆ ಸೇರಿಕೊಂಡರು. ಚಿತ್ರಕಾರನು ತಾನು ಸಿದ್ಧ ಪಡಿಸಿದ ಚಿತ್ರಗಳನ್ನೆಲ್ಲಾ ಸಾಲಾಗಿ ಜೋಡಿಸಿ, ಪ್ರತಿಯೊಂದು ಚಿತ್ರವನ್ನೂ ಪರಿ ಶೀಲಿಸುತ್ತಾ, ಉದಯನನಕಡೆ ಆಗಾಗ್ಗೆ ನೋಡುತ್ತಾ ನಡೆದ. ನಡುವೆ ಒಂದು ಚಿತ್ರದ ಹತ್ತಿರ ಬರಲು ಚಿತ್ರಕಾರನು ಉದಯನನ ಕಡೆ ನೋಡಿ, ಆ ಚಿತ್ರವನ್ನು ಉದಯನನ ಪಕ್ಕದಲ್ಲಿಟ್ಟು ಮತ್ತೆ ಸೂಕ್ಷ್ಮವಾಗಿ ಪರಿಶೀ ಲಿಸಿ, "ಭೇಷ್, ಇದು ನಿಮಗೆ ಸರಿ ಹೋಯಿತು. ಈ ವೇಷ ಹಾಕಿದರೆ ನಿಮ್ಮ ನ್ನಾರೂ ಕಂಡು ಹಿಡಿಯಲಾರರು" ಎಂದನು.

"ಹೌದು" ಎಂದ ಉದಯನ ಸಂತೋಷ ದಿಂದ ತುಂಬಿದ ಹೃದಯದಿಂದ. ಆಕೂಡಲೇ ಉದಯನನಿಗೆ ರಾಕ್ಷಸನ ಅನುಚರರಲ್ಲಿ ಒಬ್ಬ ನಂತೆ ವೇಷ ಹಾಕಿದ ಚಿತ್ರಕಾರ. ಒಂದೆರಡು ಸಾರಿ ಕನ್ನಡಿಯಲ್ಲಿ ನೋಡಿಕೊಂಡ ಉದ

ಯನ. "ಬಹಳ ಸೊಗುಸಾಗಿದೆ" ಎಂದು ಕೊಂಡು, ಮಾರನೇಯು ದಿನವೇ ರಾಜನ ಅಪ್ಪಣೆ ಪಡೆದು ಮತ್ತೆ ಕೊಳದ ಕಡೆ ಹೊರಟ.

ಕೊಳವನ್ನು ಸೇರಿದಕೂಡಲೇ ತನ್ನ ಹತ್ತಿರ ವಿದ್ದ ಭಸ್ಮಕ್ಕಾಗಿ ಅಭ್ಯಾಸ ಬಲದಿಂದ ತಡವಿ ನೋಡಿಕೊಂಡ. ಭಸ್ಮವಿರಲಿಲ್ಲ.

'ಏನುಮಾಡಲಿ?' ಎಂದು ತುಸ ಸಮಯ ಚಿಂತಿಸಿ, ಮರುಕ್ಷಣವೇ ಧೈರ್ಯವಹಿಸಿದ. ಕತ್ತಲಾಗುವವರೆವಿಗೂ ಯಾರಕಣ್ಣಿಗೂ ಬೀಳದೆ ಒಂದು ಪೊದೆಯಲ್ಲಿ ಅವಿತಿಟ್ಟು ಕೊಂಡನು.

ಕತ್ತಲಾಯಿತು. ರಾಕ್ಷಸನ ಪರಿವಾರದಲ್ಲಿ ಮತ್ತೆ ಕೆಲವರು ಕೊಳದ ಹತ್ತಿರ ಬಂದು, ಹಿಂದೆ ಅಲ್ಲಿ ಕಾವಲು ಕಾಯುತ್ತಿದ್ದದಳವನ್ನು ಬಿಡುಗಡೆ ಮಾಡಿದರು. ಸಂಧಿ ಮುಗಿಸಿದವರು ಪಾತಾಳಗೃಹವನ್ನು ಸೇರಿ, ಒಬ್ಬೊಬ್ಬರೇ ಒಳಕ್ಕೆ ಪ್ರವೇಶಿಸಿದರು. ಕಡೆಯಲ್ಲಿದ್ದವನು ಒಳಗೆ ಪ್ರವೇಶಿಸುವಾಗ ಉದಯನನೂ ಸಹ ಚಾಲೂಕಾಗಿ ಅವನ ಹಿಂದೆ ನುಗ್ಗಿಬಿಟ್ಟನು.

ತನ್ನ ಮಾಯಾವೇಷ ಎಲ್ಲಿ ತಿಳಿದುಬಿಡು ವುದೋ ಎಂದು ಉಧಯನ ಮನಸ್ಸಿನಲ್ಲಿ ಭಯಪಡುತ್ತಲೇ ಇದ್ದ. ಆದರೆ ದೈವವಶಾತ್ ಇದುವರೆವಿಗೂ ಅಂಥ ಆಪತ್ತೇನೂ ಸಂಭ ವಿಸಲಿಲ್ಲ. ಏಕೆಂದರೆ ಆತನ ವೇಷ ಕಂಡು, ಆತನು ಯಾರೋ ತಮ್ಮ ಗುಂಪಿನವನೇ ಇರ ಬಹುದೆಂದುಕೊಂಡರು ಉಳಿದ ಕಾವಲು ಗಾರರು.



ಈಸಾರಿ ಉದಯನನು ಮೆಟ್ಟಿಲುಗಳ ನ್ನೆಲ್ಲಾ ಇಳಿದು ಆ ಸಿಂಹಗಳ ಪಕ್ಕದಲ್ಲೇ ಹೋದ. ಗುಂಪಿನಲ್ಲಿ ತಾನು ಕಲೆತಿದ್ದುದ ರಿಂದ ಅವು ಪ್ರತ್ಯೇಕವಾಗಿ ತನ್ನನ್ನು ಕಂಡು ಹಿಡಿಯಲಾರವೆಂದು ಉದಯನನಿಗೆ ಧೈರ್ಯ. ಆದರೆ ಆ ಸಿಂಹಗಳು ಹೊಸಬನನ್ನು ಸುಲಭ ವಾಗಿ ಕಂಡು ಹಿಡಿದುಬಿಟ್ಟವು. ಅಷ್ಟಕ್ಕೆ ಸುಮ್ಮನಿತ್ತೇ? ಒಂದು ಸಾರಿ ಆರ್ಭಟಿಸಿ ಆತನಮೇಲೆ ಬಿದ್ದು ಕೊಲ್ಲಲು ಪ್ರಯತ್ನಿಸಿ ದವು. ಕಿಟಾರನೆ ಕಿರಿಚಿ ಉದಯನನು ಬಿದ್ದು ಹೋದನು.

ಇದನ್ನು ಕಂಡು ಮಿಕ್ಕವರು ಓಡಿಬಂದು, ಒಂದೇ ಏಟಿಗೆ ಸಿಂಹಗಳೆರಡನ್ನೂ ಕೊಂದು ಹಾಕಿದರು. ತರುವಾಯ ಉದಯನನನ್ನು ಎತ್ತಿಕೊಂಡು ಹೋಗಿ ಒಂದು ಹಾಸಿಗೆ

ಮೇಲೆ ಮಲಗಿಸಿ, ಸುತ್ತಲೂ ಸೇರಿದರು. "ನಮ್ಮನ್ನೇ ಕೊಲ್ಲಲು ಪ್ರಯತ್ನಿಸಿದವಲ್ಲಾ ಈ ಸಿಂಹಗಳು! ಎಷ್ಟು ಕೊಬ್ಬು! ಒಳ್ಳೆ ಕೆಲಸ ಮಾಡಿದೆಯಣ್ಣಾ" ಎಂದು ಸಿಂಹಗಳನ್ನು ಕೊಂದಾತನನ್ನು ಮೆಚ್ಚಿಕೊಂಡರು. ತರುವಾಯ ಅವರು ಉದಯನನಿಗೆ ಉಪಚಾರ ಮಾಡಿದರು. ಗಾಯಗಳಿಗೆ ಕಟ್ಟುಬಿಗಿದರು.

ಸ್ವಲ್ಪ ಸುಧಾರಿಸಿದ ತರುವಾಯ "ಎಲೆ ತಮ್ಮಾ, ನಿನ್ನ ಗಾಯಗಳು ಗುಣವಾಗುವವರೆವಿಗೂ ನೀನಿಲ್ಲೇ ಇರು. ಅಷ್ಟರವರೆವಿಗೂ ನಿನ್ನ ಕೆಲಸ ನಾವು ನೋಡಿಕೊಳ್ಳುತ್ತಿರುತ್ತೇವೆ" ಎಂದರು.

"ಹಾಗಾದರೆ ಮತ್ತೊಂದು ಉಪಕಾರ ಮಾಡಿಹೋಗಿ. ನನಗೆ ಕಾಲು ಕದಲಿಸುವ ಚೈತನ್ಯವಿಲ್ಲ. ಆದ್ದರಿಂದ ನನ್ನ ಊಟದ ವ್ಯವಸ್ಥೆ ಸಹ ಮಾಡಿ ಹೋಗಿ, ನಿಮಗೆ ಪುಣ್ಯ ಬರುತ್ತದೆ" ಎಂದ ಉದಯನ.

"ಅದಕ್ಕೇನಂತೆ" ಎಂದು ಅವರು ಉದಯನನಿಗೆ ಮಾಂಸ ಮತ್ತು ಮದ್ಯ ತಂದು ಕೊಟ್ಟರು ತರುವಾಯ ಊಟ ಮತ್ತು ನಿದ್ದೆಗೆ ತಕ್ಕ ವ್ಯವಸ್ಥೆ ಮಾಡಿ ತಮ್ಮ ತಮ್ಮ ದಾರಿ ನಡೆದರು.

ಬೆಳಗಾಯಿತು. ರಾಕ್ಷಸನ ನೌಕರರು ಕೊಳದ ಹತ್ತಿರಕ್ಕೆ ಹೋಗಿ ಅಲ್ಲಿದ್ದ ಕಾವಲುಗಾರರನ್ನು ಬಿಡುಗಡೆ ಮಾಡಿದರು. ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ಆ ಹೊಸ ಪಡೆಯವರು ಉದಯನನ ಹತ್ತಿರ ಬಂದು "ಅದೃಷ್ಟವಂತನೋಪ್ಪಾ ನೀನು" ಎಂದು ತಮಾಷೆ ಮಾಡಿದರು. ರಾತ್ರಿಯೆಲ್ಲಾ ಕಾವಲು ಕಾದು ಸುಸ್ತಾಗಿದ್ದುದರಿಂದ ಅವರು ಕೆಲಹೊತ್ತಿಗೆಲ್ಲಾ ಗೊರಕೆ ಹೊಡೆಯುತ್ತಾ ನಿದ್ದೆ ಹೋದರು.

ಸರಿಯಾಗಿ ಅರ್ಧರಾತ್ರಿ ವೇಳೆಗೆ ರಾಕ್ಷಸ ಬಂದುಬಿಟ್ಟನು. ಬಂದಕೂಡಲೇ ಮೆಟ್ಟಿಲಿನ ಕೆಳಗೆ ಸಿಂಹಗಳೆರಡೂ ಸತ್ತು ಬಿದ್ದಿರುವುದನ್ನು ಕಂಡನು "ಯಾರೋ ಈ ಕೆಲಸ ಮಾಡಿದವರು?' ಎಂದು ಬೊಬ್ಬಿಡುತ್ತಾ ಉದಯನನು ಮಲಗಿದ್ದ ಸ್ಥಳಕ್ಕೆ ಬಂದನು.

—[ ಇನ್ನೂ ಇದೆ ]





# ಬಡವನ ಭಾಗ್ಯ



ಒಂದೂರಿನಲ್ಲಿ ಅವಧಾನಿ ಎಂಬ ಬಡ ಬ್ರಾಹ್ಮಣನೊಬ್ಬನಿದ್ದ. ಅವಧಾನಿ ಶಿವಭಕ್ತ. ಇದ್ದಿದ್ದರಲ್ಲೇ ಸಂತೃಪ್ತಿ ಪಡುವ ಸರಳಮನುಷ್ಯ. ಆತನ ಹೆಂಡತಿ ಸಾವಿತ್ರಮ್ಮ ಪತಿವ್ರತೆ. ಅವರಿಗೆ ನಾಲ್ಕು ಮಕ್ಕಳಿದ್ದರು—ಮೂವರು ಗಂಡೂ, ಒಂದು ಹೆಣ್ಣು.

ಆತನ ಬಡತನದೊಂದಿಗೆ ಅಂಧತ್ವ ಸಹ ಪ್ರಾಪ್ತವಾಯಿತು. ಪಾಪ, ಈ ದೊಡ್ಡ ಸಂಸಾರವನ್ನು ಪೋಷಿಸುವ ಸಲುವಾಗಿ ಆತನು ಆ ಊರಿನ ಕೊನೆಯಲ್ಲಿದ್ದ ಈಶ್ವರ ದೇವಸ್ಥಾನಕ್ಕೆ ಹೋಗಿ ಅಲ್ಲಿ ತನ್ನ ಹರಿದ ಒಂದು ಚೂರು ಅರಿವೆಯನ್ನು ಹಾಸಿ ಕುಳಿತುಕೊಳ್ಳುತ್ತಿದ್ದ. ಆಲಯಕ್ಕೆ ಬರುವ ಮತ್ತು ಹೋಗುವ ಭಕ್ತಾದಿಗಳು ತಮಗೆ ತೋರಿದ್ದು ಹಣ್ಣೋ ಕಾಯಿಯೋ, ಅಕ್ಕಿಯೋ ದುಡ್ಡೋ ಹಾಕಿ ಹೋಗುತ್ತಿದ್ದರು. ಅವಧಾನಿಯನ್ನು ದಿನಾ ಬೆಳಗ್ಗೆ ಹೆಂಡತಿಯೋ, ಮಕ್ಕಳೋ ಗುಡಿಗೆ ಕರೆತಂದು ಬಿಟ್ಟು ಸಾಯಂಕಾಲ ಮನೆಗೆ ಕರೆದುಕೊಂಡು ಹೋಗುವರು.

ರಾಮಯ್ಯ ಶೆಟ್ಟಿ ಎಂಬ ಒಬ್ಬ ಕೋಮಟಿಯು ಮನೆ ಹತ್ತಿರವಿದ್ದ ಗುಡಿಸಲನ್ನು ತಿಂಗಳಿಗೆ ಒಂದು ರೂಪಾಯಿ ಬಾಡಿಗೆಗೆ ಗೊತ್ತು ಮಾಡಿಕೊಂಡು, ಅಲ್ಲಿ ಅವಧಾನಿ ಕಾಲ ಕಳೆಯುತ್ತಿದ್ದ. ಶೆಟ್ಟಿ ಅಂತಿಂತಹ ಮನುಷ್ಯನಲ್ಲ. ತುಂಬಾ ಕಟ್ಟುನಿಟ್ಟು ಆಸಾಮಿ. ತಿಂಗಳಾಗುವುದೇ ತಡ ಬಾಡಿಗೆ ಕೈಗೆ ಬಾರದಿದ್ದರೆ ಬ್ರಾಹ್ಮಣನಿಗೆ ನಾನಾ ತೊಂದರೆ ಕೊಡುವನು.

ಒಂದು ದಿನ ದೀಪ ಹಚ್ಚುವ ಸಮಯವಾದರೂ ಬ್ರಾಹ್ಮಣನಿಗಾಗಿ ಮನೆಯಿಂದ ಯಾರೂ ಬರಲಿಲ್ಲ. ಆತನು ಅವರಿಗಾಗಿ ನಿರೀಕ್ಷಿಸುತ್ತಲೇ ಇದ್ದ. ಸ್ವಲ್ಪ ಹೊತ್ತಿಗೆ ಆತನ ಹೆಂಡತಿ ಬಿಕ್ಕಿಬಿಕ್ಕಿ ಅಳುತ್ತಾ ಬಂದಳು "ಏನು ವಿಷಯ?" ಎಂದು ಆತುರದಿಂದ ಕೇಳಿದ ಅವಧಾನಿ.

"ಇನ್ನೇನಿದೆ? ನಮ್ಮ ಶೆಟ್ರು ಬಾಡಿಗೆ ವಸೂಲಿಗಾಗಿ ಅವರ ನಕ್ಷತ್ರಕನನ್ನು ಕಳುಹಿಸಿದರು. ಅವನು ದಯಾದಾಕ್ಷಿಣ್ಯವಿಲ್ಲದೆ ಸಾಮಾನುಗಳನ್ನೆಲ್ಲಾ ಬೀದಿಗೆಸದ. ನನ್ನನ್ನೂ ಮತ್ತು ಮಕ್ಕಳನ್ನೂ ಕತ್ತು ಹಿಡಿದು ಹೊರಗೆ ನೂಕಿದ" ಎಂದಳು. ಬ್ರಾಹ್ಮಣನು ಕೇಳಿ

ಟಿ. ವಿಶ್ವನಾಥ



ಏನು ತಾನೇ ಮಾಡುತ್ತಾನೆ? ಇಬ್ಬರೂ ಕುಳಿತುಕೊಂಡು ಸ್ವಲ್ಪ ಹೊತ್ತು ಅತ್ತರು. ಹಿಂತಿರುಗಿ ಹೋಗಿ ಗುಡಿಸಿಲಿಗೆ ಎದುರಾಗಿ ಬೀದಿಯಲ್ಲಿ ಒಂದು ಮರದ ಕೆಳಗೆ ಮಕ್ಕಳನ್ನು ಇಟ್ಟುಕೊಂಡು ಕುಳಿತರು.

ಆ ಸಮಯದಲ್ಲಿ ಗಗನ ಮಾರ್ಗದಲ್ಲಿ ಪುಷ್ಪಕವಿಮಾನದಲ್ಲಿ ಪಾರ್ವತಿಪರಮೇಶ್ವರರು ಹೋಗುತ್ತಿದ್ದರು. ಸಾವಿತ್ರಮ್ಮನ ಶೋಕ ಪಾರ್ವತಿದೇವಿಗೆ ಕೇಳಿಸಿತು. "ನಾಥಾ, ನಮ್ಮ ಭಕ್ತರು ಪಡುತ್ತಿರುವ ಪಾಡು ಕಾಣಿಸುತ್ತಿಲ್ಲವೇ? ಅವರ ರೋದನೆ ಕೇಳಲಾರೆನು. ಆ ಬ್ರಾಹ್ಮಣನನ್ನು ನಾಳೆ ಒಬ್ಬ ಲಕ್ಷಾಧಿಕಾರಿಯನ್ನಾಗಿ ಮಾಡಿ" ಎಂದು ಬೇಡಿಕೊಂಡಳು.

ಅದಕ್ಕೆ ಪರಮೇಶ್ವರನು "ದೇವೀ, ಆ ಬ್ರಾಹ್ಮಣ ತಾನು ಮಾಡಿ ಕೊಂಡ ಕರ್ಮವನ್ನು ಅನುಭವಿಸುತ್ತಿರುವನು. ಶೀಘ್ರದಲ್ಲೇ ಆತನ ಕಷ್ಟಗಳು ತೀರಿ, ಸುದಿನಗಳನ್ನು ಕಾಣುವನು" ಎಂದು ಉತ್ತರ ಹೇಳಿದ.

"ಹೇಗಾದರೂ ಇರಲಿ, ಆ ಅದೃಷ್ಟ ಈಗಲೇ ಪ್ರಸಾದಿಸಬೇಕು" ಎಂದು ಹಠ ಹಿಡಿದಳು. ಇಲ್ಲ ಅಂತ ಹೇಳಲಾರದೆ "ಆಗಬಹುದು" ಎಂದ ಪರಮೇಶ್ವರ.

ಶೆಟ್ಟಿ ದಿನಾ ದೇವಸ್ಥಾನಕ್ಕೆ ಹೋಗುವುದು ವಾಡಿಕೆ. ಬ್ರಾಹ್ಮಣನು ಮನೆಗೆ ಹಿಂತಿರುಗಿದ ಸಮಯದಲ್ಲಿ ಆತನು ಗುಡಿಯಲ್ಲೇ ಇದ್ದ. ಎಷ್ಟು ಹೊತ್ತು ಕಾದರೂ ಪೂಜಾರಿ ಬರಲಿಲ್ಲ. ಇದ್ದಕ್ಕಿದ್ದಂತೆಯೇ ಗುಡಿಯಲ್ಲಿ ಒಂದು ವಿಚಿತ್ರ ನಡೆಯಿತು. ಈಶ್ವರನ ವಿಗ್ರಹವು ಗಣಪತಿ ವಿಗ್ರಹವನ್ನು ಕರೆದು "ವತ್ಸಾ, ದಿನಾ ನಮ್ಮ ಆಲಯಕ್ಕೆ ಬರುವ ಅಂಥ ಬ್ರಾಹ್ಮಣನು ನಾಳೆ ಒಬ್ಬ ಲಕ್ಷಾಧಿಕಾರಿಯಾಗುವಂತೆ ಮಾಡಬೇಕು" ಎಂದಿತು.

"ಅದಕ್ಕೇನು. ಮಾಡುತ್ತೇನೆ" ಎಂದ ಗಣಪತಿ.

ಈ ಮಾತಿನ ಪ್ರತಿ ಅಕ್ಷರವೂ ಶೆಟ್ಟಿಯ ಕಿವಿಯಲ್ಲಿ ಪ್ರತಿ ಧ್ವನಿಸುತಲಿತ್ತು. ಆತನು ಅಲ್ಲಿದ್ದ ವಿಭೂತಿ ಸ್ವಲ್ಪ ತೆಗೆದುಕೊಂಡು ಹಣೆಗೆ ಹಚ್ಚಿ ಮನೆಗೆ ಗಬಗಬನೆ ಬಂದ.

ಕತ್ತಲಾದಮೇಲೆ ಸ್ವತಃ ಒಂದು ಲಾಂದರವನ್ನು ಕೈಯಲ್ಲಿ ಹಿಡಿದುಕೊಂಡು ಹೋಗಿ, ಬ್ರಾಹ್ಮಣನನ್ನು ಮಾತನಾಡಿಸಿ, ನಮಸ್ಕಾರ ಮಾಡಿ ಹೀಗೆಂದ! "ನಮ್ಮ ಸುಬ್ಬ ಬಾಡಿಗೆ

ಗಾಗಿ ನಿಮಗೆಲ್ಲಾ ಕಷ್ಟ ಕೊಟ್ಟನೆಂದು ನನ ಗೀಗ ತಿಳಿಯಿತು. ಅಯೋಗ್ಯ ಅವನು. ಮರ್ಯಾದೆ ತಿಳಿಯದವ. ತಂದೆಯಂಥವ ರಾದ ನಿಮ್ಮನ್ನು ತೊಂದರೆ ಪಡಿಸುವುದೇ? ಎಂತಹ ಅತ್ಯಾಚಾರ ನಡೆಯಿತು! ಆ ತಪ್ಪ ನನ್ನ ತಪ್ಪೇ ಅಂತ ಭಾವಿಸಿ ಬಾಡಿಗೆ ಸಮಾ ಚಾರ ಮರೆತುಬಿಡಿ. ಪೊರಪಾಟನ್ನು ಮನ್ನಿಸಿ. ನಿಮ್ಮಿಷ್ಟ ಬಂದಷ್ಟು ದಿನ ನಮ್ಮ ಮನೆಯಲ್ಲಿರಿ. ನಿಮಗೇನು ಅಭ್ಯಂತರ?" ಎಂದು ಸಾಮಾನು ಗಳನ್ನು ಮೊದಲಿದ್ದ ಗುಡಿಸಿಲಿಗೆ ಸಾಗಿಸಿ, ಅವರನ್ನು ಮತ್ತೆ ಪ್ರವೇಶಮಾಡಿಸಿದ.



ಅಷ್ಟೇ ಅಲ್ಲ. ಒಂದು ಹತ್ತು ರೂಪಾಯಿ ಅವಧಾನಿಗಳ ಕೈಯಲ್ಲಿಟ್ಟು ಆಶೀರ್ವಾದ ಮಾಡುವಂತೆ ಕೇಳಿಕೊಂಡ. ಹುಟ್ಟುದರಿದ್ರನೇ ಆದರೂ ಅವಧಾನಿ ಆ ಹಣಕ್ಕೆ ಆಶೆಪಡಲಿಲ್ಲ. ಆಗ ಶೆಟ್ಟಿ ನೂರು ರೂಪಾಯಿ ಕೊಟ್ಟ "ಈ ಕಾಣಿಕೆ ನೀವು ತೆಗೆದುಕೊಳ್ಳಬೇಕು. ನಿಮ್ಮ ಆಶೀರ್ವಾದ ನನಗೆ ಮುಖ್ಯ" ಎಂದು ಬೇಡಿ ಕೊಂಡ. ಅವಧಾನಿ ಬೇಡಲೇ ಬೇಡವೆಂದ.

ಆಗ ಶೆಟ್ಟಿ "ಅಷ್ಟು ಸಂಕೋಚವಾದರೆ ನೀವು ನನ್ನ ಹಣ ಸುಮ್ಮನೆ ತೆಗೆದುಕೊಳ್ಳ ಬೇಡಿ. ಇದನ್ನು ತೆಗೆದುಕೊಂಡು ನಾಳೆದಿನ ನೀವು ಹರಡುವ ಬಟ್ಟೆಯ ಮೇಲೆ ಏನು ಬಿದ್ದರೆ ಅದನ್ನು ನನಗೆ ಕೊಡಿ" ಎಂದ.

ಬ್ರಾಹ್ಮಣ ಒಪ್ಪಿಕೊಳ್ಳಲಿಲ್ಲ. ಶೆಟ್ಟಿ ಬಿಡ ಲಿಲ್ಲ. ಬ್ರಾಹ್ಮಣ ಬೇಡವೆಂದಷ್ಟೂ, ಶೆಟ್ಟಿ ಬಿಡದೆ ಎಪ್ಪತ್ತೈದು ಸಾವಿರದವರೆವಿಗೂ ಏರಿಸಿದ. ಆದರೂ ಬ್ರಾಹ್ಮಣ ಅಂಗೀಕರಿಸ ಲಿಲ್ಲ. ಆಗ ಸಾವಿತ್ರಮ್ಮ ನಡುವೆ ಬಂದು "ಶೆಟ್ರೇ ಅವರೊಂದಿಗೇನು ಬಿಡಿ. ನೀವು ಹೇಳಿದ ಹಣ ತರಿಸಿ. ನಾನು ಅವರನ್ನು ಒಪ್ಪಿಸುತ್ತೇನೆ" ಎಂದಳು. ಇನ್ನೂ ತನಗೆ ಇಪ್ಪತ್ತೈದು ಸಾವಿರ ಹೆಚ್ಚು ಬರುತ್ತದೆಂಬ ಸಂತೋಷದಿಂದ ಶೆಟ್ಟಿ ಎಪ್ಪತ್ತೈದು ಹಣದ ಚೀಲಗಳನ್ನು ತರಿಸಿ ಅವಧಾನಿ ಮನೆಯಲ್ಲಿ ರಿಸಿದ.

ಮರುದಿನ ಬೆಳಿಗ್ಗೆ ಶೆಟ್ಟಿ ಅವಧಾನಿ ಸಂಗಡ ಹೋಗಿ ಅಂಗವಸ್ತ್ರದಲ್ಲಿ ಏನು ಬೀಳುವುದೋ ಎಂದು ಎವೆಯಿಕ್ಕದೆ ನೋಡುತ್ತಾ ಕುಳಿತಿದ್ದ. ಮಾಮೂಲಾಗಿ ಬೀಳುತ್ತಿದ್ದ ದಿನಸುಗಳೂ ಸಹ ಅಂದು ಬೀಳಲಿಲ್ಲ. ಸಾಯಂಕಾಲ ವಾಗುವ ವೇಳೆಗೆ ಎರಡು ಕೆಟ್ಟುಹೋದ

ಬದನೇಕಾಯಿಗಳು ಬಿದ್ದವು. ಬೆಳಗಿಂದ ಉಸಿರು ಬಿಗಿಹಿಡಿದುಕೊಂಡು ಕುಳಿತಿದ್ದ ಶೆಟ್ಟಿ ಆಕ್ರೋಷಗೊಂಡು ಗಬಕ್ಕನೆ ಎದ್ದು ಗಣಪತಿಯ ವಿಗ್ರಹದ ಹತ್ತಿರಹೋಗಿ "ಏನಯ್ಯಾ ಗಣಪತಿ; ನೀನು ಬ್ರಾಹ್ಮಣನಿಗೆ ಕೊಡವೆನೆಂದ ಲಕ್ಷ ರೂಪಾಯಿಗಳೆಲ್ಲಿ? ಪಾಪ. ಆತನೆಷ್ಟು ತೊಂದರೆ ಪಡುತ್ತಿರುವನೋ ನಿನಗೇನಾದರೂ ತಿಳಿದಿದೆಯೇ? ಬಾಯಿಬಿಟ್ಟು ನೀನೇ ಹೇಳಿದೆ. ದೇವರೆಂದು ಹೇಳಿಕೊಂಡು ನೀನೇ ಈ ರೀತಿ ದಗಾಹಾಕಿದರೆ ಇನ್ನು ಪ್ರಪಂಚ ತಲೆಕೆಳಗಾಗುವುದಿಲ್ಲವೇ?" ಎಂದು ನಿಂದಿಸುತ್ತಾ ಸೊಂಡಿಲನ್ನು ಹಿಡಿದೆಳೆಯಲು ಉದ್ಯುಕ್ತನಾದ. ದೈವಪ್ರಭಾವ! ಮುಟ್ಟಿದೊಡನೆಯೇ ಶೆಟ್ಟಿ ಕೈ ಸೊಂಡಿಲಿಗೆ ಅಂಟಿಕೊಂಡಿತು. ಎಷ್ಟು ಹೆಣಗಾಡಿದರೂ ಬರಲೊಲ್ಲದು. ಆಗ ಮತ್ತೆ ಪರಮೇಶ್ವರನ ವಿಗ್ರಹವು "ಅಂಥ ಬ್ರಾಹ್ಮಣನ ವಿಷಯ ಏನು ಮಾಡಿದೆ, ಕುಮಾರಾ?" ಎಂದಂತೆ ಕೇಳಿಸಿತು. ಅದಕ್ಕೆ ಗಣಪತಿ "ಎಪ್ಪತ್ತೈದು ಸಾವಿರ ಆಗಲೇ ಕೊಡಿಸಿದೆ ಅಪ್ಪಾಜಿ. ಮಿಕ್ಕ ಇಪ್ಪತ್ತೈದು ಸಾವಿರ ಈಗಲೇ ಕೊಡಿಸಿಕೊಡುತ್ತೇನೆ" ಎಂದು ಹೇಳಿ ಶೆಟ್ಟಿಯೊಡನೆ "ಎಲೈ ಶೆಟ್ಟೀ, ಕೂಡಲೇ ಇನ್ನು ಇಪ್ಪತ್ತೈದು ಸಾವಿರವನ್ನು ಬ್ರಾಹ್ಮಣನಿಗೆ ಕೊಡಿಸುವ ಏರ್ಪಾಡು ಮಾಡು. ಆಗ ನಿನ್ನ ಕೈ ಬಿಡಿಸಿಕೊ" ಎಂದನು.

ಈ ಮಾತುಗಳನ್ನು ಕೇಳಿ ಶೆಟ್ಟಿಗೆ ಹೆದರಿಕೆ ಹುಟ್ಟಿಕೊಂಡಿತು. ತಕ್ಷಣವೇ ಉಳಿದ ಇಪ್ಪತ್ತೈದು ಸಾವಿರ ರೂಪಾಯಿ ಬ್ರಾಹ್ಮಣನಿಗೆ ಸೇರುವಂತೆ ಏರ್ಪಾಟು ಮಾಡಿದ. ಕೂಡಲೇ ಆತನ ಕೈ ಸಲೀಸಾಗಿ ಬಂದುಬಿಟ್ಟಿತು. ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಮನೆ ಸೇರಿದ. ಬ್ರಾಹ್ಮಣನಿಗೆ ಪಾರ್ವತಿಪರಮೇಶ್ವರರ ಅನುಗ್ರಹದಿಂದ ಲಕ್ಷ ರೂಪಾಯಿಗಳು ಲಭಿಸಿದುದು ಮಾತ್ರವೇ ಅಲ್ಲದೆ ದೃಷ್ಟಿಯೂ ಲಭಿಸಿತು.

ನೋಡಿದಿರಾ ಪರಮೇಶ್ವರನ ಲೀಲೆಗಳನ್ನು! ಕ್ಷಣಮಾತ್ರದಲ್ಲಿ ಬಡ ಬ್ರಾಹ್ಮಣ ಲಕ್ಷಾಧಿಕಾರಿಯಾದ; ಶೆಟ್ಟಿ ಭಿಕ್ಷಾಧಿಕಾರಿಯಾದ. ಆದ್ದರಿಂದಲೇ ಹಣ ಶಾಶ್ವತವಲ್ಲ, ಗುಣ ಮತ್ತು ನಡೆತೆಯೇ ಎಂದೆಂದಿಗೂ ಶಾಶ್ವತ ಎಂದು ಹೇಳುವರು ಹಿರಿಯರು.






ಹಿಂದೆ ಪಂಡರಿಪುರದಲ್ಲಿ ಒಬ್ಬಾನೊಬ್ಬ ಭಾಗವತನಿದ್ದ. ಆತನ ಭಾರ್ಯೆ ಕಮಲಾವತಿ ಪತಿಭಕ್ತಿ ಪರಾಯಣಳು. ಆ ದಂಪತಿಗಳು ಬಹಳ ಭಕ್ತಿಯಿಂದ ರುಕ್ಮಿಣಿದೇವಿಯನ್ನು ಆರಾಧಿಸುತ್ತಿದ್ದರು. ಒಂದು ದಿನ ದೇವಿ ಅವರಿಗೆ ಪ್ರತ್ಯಕ್ಷವಾಗಿ "ನಿಮ್ಮ ಭಕ್ತಿಗೆ ಸಂತೃಪ್ತಳಾದೆ. ನಿಮಗೆ ಬೇಕಾದ ವರವನ್ನು ಕೇಳಿಕೊಳ್ಳಿ" ಎಂದಳು. ಅದಕ್ಕೆ ಅವರು "ತಾಯೀ ನಿನಗೆ ತಿಳಿಯದಿರುವುದಾದರೂ ಏನಿದೆ. ಸಂಸಾರ ಯಾತ್ರೆ ಸುಸೂತ್ರವಾಗಿ ನಡೆಯಲು ತಕ್ಕ ಸಾಧನವನ್ನು ನೀನೇ ಆಲೋಚಿಸಿ ಅನುಗ್ರಹಿಸಬೇಕು" ಎಂದು ಪ್ರಾರ್ಥಿಸಿದರು. ಆಗ ರುಕ್ಮಿಣಿದೇವಿ 'ಸ್ಪರ್ಶವೇದಿ' ಯನ್ನು ಅನುಗ್ರಹಿಸಿದಳು. ಆ ಸ್ಪರ್ಶವೇದಿಯಿಂದ ಯಾವುದನ್ನು ಮುಟ್ಟಿದರೂ ಚಿನ್ನವಾಗುವುದು! ಹಾಗೆಂದರೆ ಇನ್ನು ಭಾಗವತನ ಬಡತನ ನೀಗಿದಂತೆಯೇ ಅಲ್ಲವೇ? ಆ ಕುಟುಂಬವಿನ್ನು ನಿಶ್ಚಿಂತೆಯಾಗಿರುವುದರಲ್ಲಿ ಆಶ್ಚರ್ಯವಾದರೂ ಏನಿದೆ? ಆದರೆ "ಈ ರಹಸ್ಯ ಗುಬ್ಬಚ್ಚಿಗಾದರೂ ತಿಳಿಯಕೂಡದು ಕಂಡೆಯಾ!" ಎಂದು ಭಾಗವತನು ಹೆಂಡತಿಗೆ ಮತ್ತೆ ಮತ್ತೆ ಎಚ್ಚರಿಸಿದ. ಅದೇಪ್ರಕಾರ ಅವರು ಹೊರಗೆ ಮಾತ್ರ ಬಡವರಂತೆ ನಟಿಸುತ್ತಾ ಕಾಲ ದೂಡುತ್ತಿದ್ದರು.

ಹೀಗೇ ಇರುವಲ್ಲಿ ಒಂದು ದಿನ ಭೀಮನದಿಯಲ್ಲಿ ನಾಮದೇವನ ಹೆಂಡತಿ ಸ್ನಾನಮಾಡುತ್ತಿರುವಾಗ ಭಾಗವತನ ಭಾರ್ಯೆ ಕಮಲಾವತಿ ಅಲ್ಲಿಗೆ ಬಂದಳು. ಅವರು ಲೋಕಾಭಿರಾಮಾಯಣ ಪ್ರಾರಂಭಿಸಿದರು. "ಅಕ್ಕಾ ನಮ್ಮ ಸ್ಥಿತಿ ಏನಂತ ಹೇಳಲಿ. ಸಂಸಾರ ಸಾಗುವುದು ತುಂಬಾ ಕಷ್ಟವಾಗಿಬಿಟ್ಟಿದೆ. ನಮ್ಮ ಯಜಮಾನರೋ ವೈರಾಗ್ಯದಿಂದ ಓಡಾಡುವರೇ ಹೊರತು ಒಂದು ಕಾಸು ಸಂಪಾದಿಸುವುದು ಕಾಣೆಸದು. ಹೇಗೆ ಮಾಡುವುದೋ ಏನೋ" ಎಂದು ತನ್ನ ದುಃಖ ತೋಡಿಕೊಂಡಳು ನಾಮದೇವನ ಹೆಂಡತಿ.

ಅದಕ್ಕೆ ಕಮಲಾವತಿ "ಅಯ್ಯೋ ಹಾಗೋ ಸಮಾಚಾರ. ಅಲ್ಲ, ಯಾರೊಂದಿಗೂ ಹೇಳುವುದಿಲ್ಲವೆಂದರೆ ಒಂದು ರಹಸ್ಯ ಹೇಳುತ್ತೇನೆ" ಎಂದು ಕೈಯಲ್ಲಿ ಭಾಷೆ ಹಾಕಿಸಿಕೊಂಡು

ಕೆ. ಪ್ರಮೀಳ, ಬೊಂಬಾಯಿ



ಹೀಗೆಂದಳು; "ತಂಗೀ, ಈ ಮಧ್ಯೆ ನಮ್ಮ ಕುಲದೇವತೆಯಾದ ರುಕ್ಮಿಣಿದೇವಿ ನಮ್ಮ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷವಾಗಿ ಸ್ಪರ್ಶವೇದಿ ಎಂಬ ಮಹತ್ತರ ವಸ್ತುವೊಂದನ್ನು ಅನುಗ್ರಹಿಸಿದಳು. ಅದರಿಂದ ಯಾವುದನ್ನು ಮುಟ್ಟಿದರೂ ಅದು ಬಂಗಾರವಾಗುವುದು. ನಾವು ಅದರ ಸಹಾಯದಿಂದ ಚಿನ್ನ ಮಾಡಿಕೊಂಡು ಬಡತನದಿಂದ ಮುಕ್ತರಾದೆವು. ಈಗ ಸಂಸಾರ ಸುಖವಾಗಿ ನಡೆಯುತ್ತಿದೆ. ಆ ಸ್ಪರ್ಶವೇದಿ ನಿನಗೆ ಕೊಡುತ್ತೇನೆ. ನಿನಗೆ ಬೇಕಾದಷ್ಟು ಬಂಗಾರ ತಯಾರಿಸಿಕೊಂಡು, ಅದನ್ನು ಮತ್ತೆ ನನಗೆ ಜಾಗರೂಕತೆಯಿಂದ ಕೊಟ್ಟುಬಿಡು. ಈ ರಹಸ್ಯ ನಿನ್ನ ಪತಿಗೂ ಹೇಳಕೂಡದು, ತಿಳಿಯಿತೇ" ಎಂದು ಹೇಳಿ ಮನೆಗೆ ಹೋಗಿ ಸ್ಪರ್ಶವೇದಿಯನ್ನು ತಂದು ನಾಮದೇವನ ಹೆಂಡತಿಗೆ ಕೊಟ್ಟಳು ಕಮಲಾವತಿ.

ನಾಮದೇವನ ಹೆಂಡತಿ ಆನಂದಭರಿತಳಾದಳು. ಕಣ್ಣಿಗೆಬಿದ್ದ ವಸ್ತುಗಳಿಗೆ ಸ್ಪರ್ಶವೇದಿಯನ್ನು ತಾಕಿಸಿ ಬಂಗಾರ ಮಾಡಿಕೊಂಡಳು. ಸಮಸ್ತ ಸಾಮಗ್ರಿಗಳನ್ನು ಕೊಂಡು ಕೊಂಡು ಸುಖವಾಗಿದ್ದಳು. ಈ ಗಲಾಟೆಯಲ್ಲಿ ಸ್ಪರ್ಶವೇದಿಯನ್ನು ಕಮಲಾವತಿಗೆ ಕೊಡುವುದನ್ನು ಮರೆತು ಬಿಟ್ಟಳು.

ಆಕೆ ಈ ರೀತಿ ಸಂತೋಷವಾಗಿರುವ ಸಮಯದಲ್ಲಿ ನಾಮದೇವನು ಮನೆಗೆ ಬಂದು, ಮನೆಯಲ್ಲೆಲ್ಲಾ ಚಿನ್ನ ತುಂಬಿರುವುದನ್ನು ಕಂಡು, ಹೆಂಡತಿಯನ್ನು ಕೂಗಿ "ನಿನಗೆ ಈ ಚಿನ್ನದ ಪಾತ್ರೆಗಳೆಲ್ಲಾ ಎಲ್ಲಿಯವು? ಯಾರು ಕೊಟ್ಟರು" ಎಂದು ಪ್ರಶ್ನೆಗಳ ಮಳೆಸುರಿಸಿದ. ಅದಕ್ಕೆ ಆಕೆ "ಮೊದಲು ಊಟಕ್ಕೆ ಏಳಿ, ಆಮೇಲೆ ಎಲ್ಲಾ ಹೇಳುತ್ತೇನೆ" ಎಂದು ಸಮಾಧಾನಪಡಿಸಹೋದಳು.

ಆದರೆ ನಾಮದೇವನು ಉಗ್ರನಾಗಿ "ಎಲೈ ಹೆಂಗಸೇ, ನನ್ನ ಹತ್ತಿರ ಈ ಆಟಗಳೆಲ್ಲಾ ಸಾಗುವುದಿಲ್ಲ" ಎಂದು ಗದರಿಸಿದ. ಆಗ ಆಕೆ ನಡುಗುತ್ತಾ ಸ್ಪರ್ಶವೇದಿಯನ್ನು ಕುರಿತು ಎಲ್ಲ ರಹಸ್ಯವನ್ನು ಹೇಳಿಬಿಟ್ಟಳು. ಅದನ್ನು ಕೇಳಿ ನಾಮದೇವನು "ನೀಚಳೇ, ಎಂತ ಅಪಚಾರಮಾಡಿದೆ. ಹಣವೆನ್ನುವುದು ಮಾರಿ ಕಾಬೇನೆಯಂತಲ್ಲವೇ. 'ಮಾತಾಪುತ್ರ ವಿರೋಧಾಯ ಹಿರಣ್ಯಾಯ ನಮೋನಮಃ'

ಎಂದು ಶಾಸ್ತ್ರಗಳಲ್ಲಿ ಹೇಳಿರುವುದು ತಿಳಿಯದೇ? ಎಲ್ಲಿ, ಆ ಸ್ಪರ್ಶವೇದಿಯನ್ನು ಇಲ್ಲಿ ತಾ, ಹೂಂ" ಎಂದು ಕೇಳಿ ತೆಗೆದುಕೊಂಡು ಅದನ್ನು ಕೈಯಲ್ಲಿ ಹಿಡಿದುಕೊಂಡು ಬೇಗಬೇಗ ಭೀಮಾನದಿಗೆ ಹೋಗಿ ಸೊಂಟದವರೆವಿಗೂ ಪ್ರವಾಹದಲ್ಲಿ ಇಳಿದು, ಸ್ಪರ್ಶವೇದಿಯನ್ನು ಗಿರಗಿರ ತಿರುಗಿಸಿ ಬಿಸಾಡಿದಮೇಲೆ ಹಗುರವಾದ ಮನಸ್ಸಿನಿಂದ ಮನೆಗೆ ಮರಳಿದ.

ನಾಮದೇವನ ಮನೆಯಲ್ಲಿ ಈ ರೀತಿಯಿರುವಲ್ಲಿ, ಕೆಲಸದಮೇಲೆ ಊರಿಗೆ ಹೋಗಿದ್ದ ಭಾಗವತ ಮನೆಗೆ ಬಂದು, ದಿಕ್ಕುತೋಚದೆ ಧಾರಾಕಾರವಾಗಿ ಕಣ್ಣೀರು ಸುರಿಸುತ್ತಿದ್ದ ಹೆಂಡತಿಯನ್ನು ಕಂಡು "ಏಕೆ ಆರೀತಿ ಅಳುತ್ತಿರುವೆ" ಎಂದುಕೇಳಿದ. ಕಮಲಾವತಿ ತಾನು ಮಾಡಿದ ತಪ್ಪನ್ನು ವಿವರವಾಗಿ ಹೇಳಿಬಿಟ್ಟಳು.

ಆಗ ಭಾಗವತನು ಬೆಂಕಿ ತುಳಿದ ಕಪಿಯಂತೆ ಹಾರುತ್ತಾ "ರಕ್ಕಸಿ, ಎಂತಹ ಕೆಲಸ ಮಾಡಿದೆ! ಗುಬ್ಬಚ್ಚಿಗಾದರೂ ತಿಳಿಸಬೇಡವೆಂದು ಮೇಲೆ ಮೇಲೆ ಹೇಳಿದ್ದಕ್ಕೆ ರಹಸ್ಯವನ್ನು ಬಯಲು ಮಾಡಿದ್ದೇ ಅಲ್ಲದೆ ವಸ್ತುವನ್ನು ಸಹ ನಾಶ ಮಾಡಿಕೊಂಡೆಯಾ? ನಿನ್ನನ್ನು ಏನು ಮಾಡಿದರೂ ಪಾಪ ಬರದು" ಎಂದು ಕೂಗಾಡಿದ. ತಕ್ಷಣ ನಾಮದೇವನ ಮನೆಗೆ ಹೋಗಿ "ನನ್ನ ಪ್ರಾಣ ಸಮಾನವಾದ ಸ್ಪರ್ಶವೇದಿಯನ್ನು ಹೇಗಾದರೂ ಸರಿ. ತಂದುಕೊಡು. ಅದು ಇಲ್ಲದಿದ್ದರೆ ನನ್ನ ಬಾಳೇ




ವ್ಯರ್ಥವಾಗುವುದು. ಕೊಡಲಿಲ್ಲ, ನಾನು, ನನ್ನ ಪತ್ನೀ ಪುತ್ರರು ಪ್ರಾಯೋಪವೇಶವಿದ್ದು ನಿನ್ನ ಮನೆ ಬಾಗಿಲಲ್ಲಿ ಪ್ರಾಣ ಬಿಡುವೆವು. ಈ ರೀತಿಯಾಗಿ ನಿನಗೆ ಬ್ರಹ್ಮಹತ್ಯಾ ಪಾತಕವು ಸುತ್ತಿಕೊಳ್ಳುವುದು" ಎಂದು ತನ್ನ ಆ ವೇದನೆಯನ್ನು ವ್ಯಕ್ತಪಡಿಸಿದ. ಅದೇಪ್ರಕಾರ ಭಾಗವತನು ಕುಟುಂಬಸಮೇತವಾಗಿ ಉಪವಾಸವಿದ್ದು ಪ್ರಾಣದಮೇಲೆ ತಂದುಕೊಂಡ.

ಅದಕ್ಕೆ ನಾಮದೇವನು "ಅಯ್ಯಾ ಭಾಗವತೋತ್ತಮನೇ. ನಿನ್ನ ಸ್ಪರ್ಶವೇದಿಯನ್ನು ಭೀಮಾನದಿಯಲ್ಲಿ ಬಿಸಾಡಿದೆ. ನಮ್ಮ ಉಭಯರ ಶ್ರೇಯಸ್ಸನ್ನೂ ಕೋರಿ ಈ ರೀತಿ ಮಾಡಿದೆ. ಧನವೆಂದರೆ ಭಕ್ತರನ್ನು ದೇವರಿಂದ ದೂರವಿಡುವ ಅನರ್ಥಕಾರಿಯಾದ

ವಸ್ತು. ಅಜ್ಞಾನದಿಂದ ಜನ ಇದಕ್ಕಾಗಿ ಒದ್ದಾಡುವರು. ನಿಮ್ಮ ಮನೆಯಲ್ಲಿ ಪ್ರಾರಂಭವಾದ ಈ ಅಜ್ಞಾನ ಅಂಟು ರೋಗದಂತೆ ನಮ್ಮ ಮನೆಗೂ ಹರಡಿತು. ಆದ್ದರಿಂದಲೇ ಈ ಕೆಲಸ ಮಾಡಿದೆ ನಾನು" ಎಂದು ಹಣದ ಮೇಲೆ ಭಾಗವತನಿಗೆ ವ್ಯಾಮೋಹ ತೊಲಗುವಂತೆ ಪ್ರಯತ್ನಿಸಿದ.

ಭಾಗವತನು ಈ ಮಾತಿಗೆ ತೃಪ್ತಿಪಡದಿರುದನ್ನು ಗಮನಿಸಿ "ಅಪ್ಪಾ, ಭಾಗವತಾಗ್ರೇಸರಾ, ಬಿಸಾಡಿದ ನಿಮ್ಮ ಸ್ಪರ್ಶವೇದಿ ನಿಮಗೆ ಹುಡಿಕಿ ಕೊಡುವೆನು. ಬನ್ನಿ" ಎಂದು ಆತನನ್ನು ಸಂಗಡ ಕರೆದುಕೊಂಡು ಭೀಮಾ ನದಿಗೆ ಹೊರಟ.

ನಾಮದೇವನು ಆತನನ್ನು ದಡದಲ್ಲಿ ನಿಲ್ಲಿಸಿ, ನದಿಯಲ್ಲಿ ಒಂದು ಸಾರಿ ಮುಳುಗಿ, ಹಿಡಿ ತುಂಬಾ ಹಲವು ಕಲ್ಲುಗಳನ್ನು ತಂದು "ಅಯ್ಯಾ ಭಾಗವತನೇ, ನನ್ನ ಹಿಡಿಯಲ್ಲಿರುವುದೆಲ್ಲಾ ಸ್ಪರ್ಶವೇದಿಗಳು. ಅದರಲ್ಲಿ ನಿನ್ನದು ಯಾವುದೋ ಪರೀಕ್ಷಿಸಿ ತೆಗೆದುಕೋ. ಬೇರೆಯದಕ್ಕೆ ಆಶೆ ಪಟ್ಟೆಯೆಂದರೆ ನಿನ್ನ ತಲೆ ಸಾವಿರ ಹೋಳುಗಳಾಗುವುದು, ಜಾಗ್ರತೆ!" ಎಂದು ಹಿಡಿ ಬಿಚ್ಚಿ ಹಿಡಿದ.

ಅದರಲ್ಲಿದ್ದುವೆಲ್ಲಾ ಸ್ಪರ್ಶವೇದಿಗಳೇ. ಎಲ್ಲಾ ಒಂದೇ ರೀತಿಯಾಗಿವೆ. ತಾಕಿಸಿದರೆ ಬಂಗಾರ ಮಾಡುವ ಗುಣ ಅವುಗಳೆಲ್ಲಕ್ಕೂ ಇದೆ. ಎಷ್ಟು ಪ್ರಯತ್ನಿಸಿದರೂ ಭಾಗವತನು ತನ್ನ ಸ್ಪರ್ಶವೇದಿಯನ್ನು ಗುರುತುಹಿಡಿಯಲಾರದೆ ಹೋದ. ಕೊನೆಗೆ ಬೇಸರಗೊಂಡು ಆ ಕಲ್ಲುಗಳನ್ನೆಲ್ಲಾ ನದಿಯಲ್ಲಿ ಬಿಸಾಡಿದ. ಭಗವಂತನ ಅನುಗ್ರಹದಿಂದ ಆತನಿಗೆ ವಿರಕ್ತಿಯುಂಟಾಗಿ ಆತ್ಮಜ್ಞಾನ ಲಭಿಸಿತು. ಆಗ ಭಾಗವತನು ತನ್ನ ಅಜ್ಞಾನಕ್ಕೆ ನಾಚಿ, ನಾಮದೇವನ ಪಾದಗಳಮೇಲೆ ಬಿದ್ದನು.

"ನನಗೆ ಈ ಕಲ್ಲುರತ್ನಗಳು ಬೇಡವೇ ಬೇಡ. ಜನ್ಮ ಸಾರ್ಥಕವಾಗುವಂತಹ ಮುಕ್ತಿಪ್ರದವಾದಂತಹ, ಮಣಿಯೊಂದನ್ನು ಕಟಾಕ್ಷಿಸು" ಎಂದು ಬೇಡಿಕೊಂಡ. ಆಗ ನಾಮದೇವನು ಆತನನ್ನು ಮೇಲಕ್ಕೆ ಎಬ್ಬಿಸಿ "ಕೃತಾರ್ಥನಾದೆ" ಎಂದು ಹೇಳಿ ಪಂಚಾಕ್ಷರಿ ಮಂತ್ರವನ್ನು ಉಪದೇಶ ಮಾಡಿದ.






# ನಂಬಿದ ಬಂಟ

ಕರ್ಪೂರ ದ್ವೀಪದ ಆಸ್ಥಾನದಲ್ಲಿ ದೂರದರ್ಶಿ ಎಂಬ ನಂಬಿಕಸ್ಥನಾದ ಮಂತ್ರಿ ಇದ್ದ. ಆತನ ಸಹಾಯದಿಂದ ರಾಜನು ಅನೇಕ ವರ್ಷಗಳು ಚೆನ್ನಾಗಿ ರಾಜ್ಯವನ್ನು ಪರಿಪಾಲಿಸಿದ. ಆತನೊಂದು ದಿನ ಮಂತ್ರಿಯನ್ನು ಹತ್ತಿರಕ್ಕೆ ಕರೆದು "ದೂರದರ್ಶಿ, ನನ್ನ ಅವಸಾನ ಕಾಲ ಸಮೀಪಿಸಿದೆ; ಆದ್ದರಿಂದ ರಾಜ್ಯಭಾರವನ್ನೆಲ್ಲಾ ನಿನ್ನ ಕೈಗೆ ಒಪ್ಪಿಸಿಬಿಡುವೆನು. ನನ್ನ ಪ್ರಿಯ ಕುಮಾರ ಪುಟ್ಟ ರೂಪಧರನನ್ನೂ ಸಹ ನಿನ್ನ ಪಾಲಿಗೆ ಒಪ್ಪಿಸುತ್ತಿರುವೆನು. ನೀನೇ ನೋಡಿಕೊಳ್ಳಬೇಕು" ಎಂದ.

"ಮತ್ತೊಂದು ಸಾರಿ ಹೇಳುತ್ತೇನೆ. ಹುಡುಗ ತನ್ನ ಮನಬಂದಂತೆ ಬೆಳೆದು ಓಡಾಡಲಿ. ಆದರೆ ಪೂರ್ವ ದಿಕ್ಕಿನಲ್ಲಿರುವ ಕಟ್ಟಕಡೆಯ ಕೋಣೆಯನ್ನು ಪ್ರವೇಶಿಸಲು ಮಾತ್ರ ಬಿಡಬೇಡ. ಅಲ್ಲಿ ಪ್ರವೇಶಿಸಿದನಾದರೆ ನಾನಾ ಕಷ್ಟಗಳಿಗೆ ಗುರಿಯಾಗಬೇಕಾದೀತು" ಎಂದು ಎಚ್ಚರಿಸಿದ. "ನಿಮ್ಮ ಮಾತನ್ನು ತಪ್ಪದೆ ನೆರವೇರಿಸುತ್ತೇನೆ" ಎಂದು ದೂರದರ್ಶಿ ವಾಗ್ದಾನ ಮಾಡಿದ ತರುವಾಯ ರಾಜನು ನಿಶ್ಚಿಂತೆಯಿಂದ ದೇಹ ಯಾತ್ರೆ ಮುಗಿಸಿದ. ರೂಪಧರನು ದೊಡ್ಡವನಾದಂತೆಲ್ಲಾ ದೂರದರ್ಶಿ ಕ್ರಮವಾಗಿ ಆತನಿಗೆ ರಾಜ್ಯಭಾರ ಒಪ್ಪಿಸಲಾರಂಭಿಸಿದ. ಎಲ್ಲ ರಾಜಕೀಯ ತಂತ್ರಗಳನ್ನು ವಿವರಿಸಿ ಹೇಳಿದ. ಅರಮನೆಯನ್ನೆಲ್ಲಾ ಒಪ್ಪಿಸಿಬಿಟ್ಟ. ಆದರೆ ಪೂರ್ವ ದಿಕ್ಕಿನಲ್ಲಿದ್ದ ಕಟ್ಟಕಡೆಯ ಕೋಣೆಯ ಬೀಗವನ್ನೆಂದೂ ತೆಗೆಯಲಿಲ್ಲ. ಆತನು ಬಿಗಿಹಿಡಿದಷ್ಟೂ ರೂಪಧರನಲ್ಲಿ ಆ ಕೊಠಡಿಯನ್ನು ನೋಡಬೇಕೆಂಬ ಕಾತುರತೆ ತೀವ್ರವಾಗುತ್ತಿತ್ತು.

ರೂಪಧರನು ಹಠ ಹಿಡಿಯಲು, ಮಂತ್ರಿ ಪ್ರತಿಹೇಳಲಾಗಲಿಲ್ಲ. ದೂರದರ್ಶಿ ಕೋಣೆಯ ಬಾಗಿಲು ತೆಗೆದ. ತ್ರಿಲೋಕ ಸುಂದರಿಯಾದ ಅಪೂರ್ವ ರೂಪರಾಶಿಯುಳ್ಳ ತರುಣಿಯೊಬ್ಬಳ ಚಿತ್ರ ಎದುರಿನಲ್ಲಿ ಕಾಣಿಸಿತು. ಅದನ್ನು ನೋಡಿದ ಕೂಡಲೇ ರೂಪಧರನು ಮೂರ್ಛೆ ಹೋದ. ತುಸ ಹೊತ್ತಾದ ಮೇಲೆ ಚೇತರಿಸಿಕೊಂಡು "ಈ ಸುಂದರಿ ಯಾರು? ಇಂಥ ಕನ್ಯೆ ನಿಜವಾಗಿ ಭೂಲೋಕದಲ್ಲಿರುವಳೇ? ನಿಜವಾಗಿದ್ದ ಪಕ್ಷದಲ್ಲಿ ಈಕೆಯನ್ನು ಮದುವೆಯಾಗದ

ಸಾ. ಕುಲಕರ್ಣಿ.



ಬಾಳು ಒಂದು ಬಾಳೇ?" ಎಂದು ಆಕೆಯ ಚರಿತ್ರೆಯನ್ನು ತನಗೆ ಹೇಳುವಂತೆ ಮಂತ್ರಿಯನ್ನು ಬಲವಂತ ಮಾಡಿದ.

ಇಷ್ಟೆಲ್ಲಾ ಆದಮೇಲೆ ಇನ್ನು ಮುಚ್ಚಿಟ್ಟು ಪ್ರಯೋಜನವೇನಿದೆ? 'ಇದರಿಂದ ಕಷ್ಟಗಳು ಪ್ರಾಪ್ತವಾಗುವುದೆಂದು ತಾನೇ ಮಹಾಪ್ರಭುಗಳು ಹೇಳಿದ್ದರು. ಆದರೆ ನನ್ನ ದೇಹದಲ್ಲಿ ಪ್ರಾಣವಿರುವವರೆವಿಗೂ ನನ್ನ ರೂಪಧರನಿಗೆ ಯಾವುದೇ ವಿಧವಾದ ಆಪತ್ತು ಬರದಂತೆ ನೋಡಿಕೊಳ್ಳುವೆನು' ಎಂದು ಮನಸ್ಸನ್ನು ದೃಢಪಡಿಸಿಕೊಂಡು, ಆ ಸುಂದರಿಯ ವಿಷಯ ಕುರಿತು ಹೀಗೆಂದ.

"ರೂಪಧರಾ, ಈಕೆ ಹೇಮರಾಜನ ಮಗಳು ಸ್ವರ್ಣಲತ. ಈಕೆ ವಾಸ ಮಾಡುವ ಅರಮನೆಯೆಲ್ಲಾ ಬಂಗಾರದಿಂದ ಕಟ್ಟಲ್ಪಟ್ಟಿದೆ. ಅರಮನೆಯಲ್ಲಿರುವ ಸಮಸ್ತ ಸಾಮಗ್ರಿಗಳೂ ಚಿನ್ನದಿಂದ ಮಾಡಲ್ಪಟ್ಟವು. ಆಕೆಗೆ ಬಂಗಾರವೆಂದರೆ ಎಷ್ಟೋ ಪ್ರೀತಿ. ಈ ವಿಷಯದಲ್ಲಿ ಆಕೆಯ ಕೋರಿಕೆಯನ್ನು ತೃಪ್ತಿಪಡಿಸಿದರೆ ಆಕೆ ನಿನ್ನನ್ನು ಆಗ ವಿವಾಹವಾಗಬಹುದು" ಎಂದು ರಹಸ್ಯ ಬಯಲು ಮಾಡಿದ. ರೂಪಧರನು ಸಂತೋಷದಿಂದ ಉಬ್ಬಿಹೋದ.

ಕೂಡಲೇ ಖಜಾನೆಯಲ್ಲಿದ್ದ ಬಂಗಾರವನ್ನೆಲ್ಲಾ ಹೊರಗೆ ತೆಗೆಯಿಸಿದ. ರಾಜ್ಯದಲ್ಲಿ ನಿಪುಣರಾದ ಕೆಲಸಗಾರರನ್ನೆಲ್ಲಾ ಕರೆಸಿದ. ಆ ಬಂಗಾರದಿಂದ ಎಂದೂ ಕಂಡೂ ಕೇಳದ ಅಪೂರ್ವವಾದ ವಸ್ತುಗಳನ್ನು ತಯಾರು ಮಾಡಿಸಿದ. ಅವುಗಳನ್ನೆಲ್ಲಾ ಒಂದು ಭಾರಿ ಹಡಗಿನ ತುಂಬಾ ತುಂಬಿಕೊಂಡು, ರಾಜ ಮತ್ತು ಮಂತ್ರಿ ಇಬ್ಬರೂ ವ್ಯಾಪಾರಸ್ಥರ ವೇಷದಲ್ಲಿ ಹೊರಟರು.

ಹೇಮರಾಜ್ಯವನ್ನು ಸೇರಿದ ಕೂಡಲೇ ದೂರದರ್ಶಿ ಕೆಲವು ಕಾಣಿಕೆಗಳನ್ನು ತೆಗೆದುಕೊಂಡು ರಾಜಪುತ್ರಿಯ ಅರಮನೆಗೆ ಹೋದ. ಇವುಗಳನ್ನು ಕಂಡು ಆಕೆ ತನ್ಮಯಳಾದಳು. ದೂರದರ್ಶಿ "ತಾಯೀ, ನಮ್ಮ ಹತ್ತಿರವಿರುವ ವಿವಿಧವಸ್ತುಗಳು ಅಷ್ಟು ಇಷ್ಟು ಅಂತ ಹೇಳಲು ಶಕ್ಯವಿಲ್ಲ. ನೀವು ಹಡಗಿಗೆ ಬಂದರೆ ಎಲ್ಲವನ್ನೂ ನೋಡಬಹುದು" ಎಂದು ಹೇಳಿದ. ಆ ವಸ್ತುಗಳಮೇಲಿನ ಆಶೆಯಿಂದ ಆಕೆ 'ಒಂದು ಸಾರಿ ಹೋಗಿ ಬಂದು

ಬಿಡೋಣ' ವೆಂದು ಯಾರಿಗೂ ತಿಳಿಯದಂತೆ ಆತನ ಹಿಂದೆ ಹೋದಳು.

ಸ್ವರ್ಣಲತ ಹಡಗು ಹತ್ತಿ ಸರಕುಗಳನ್ನು ನೋಡಲಾರಂಭಿಸಿದಳು. ನೋಡುವುದು ಮಾತ್ರವೇ? ಆ ಅಪೂರ್ವ ಪದಾರ್ಥಗಳನ್ನು ನೋಡುತ್ತಾ ಪರವಶಳಾದಳು. ಇದನ್ನು ಕಂಡ ಹಿಡಿದ ರೂಪಧರನು ಪರದೆಗಳನ್ನು ಏರಿಸುವಂತೆ ಆಜ್ಞಾಪಿಸಿದ. ಕೂಡಲೇ ಹಡಗು ಶರವೇಗದಿಂದ ಸಾಗತೊಡಗಿತು.

ಬೇಕಾದ ವಸ್ತುಗಳನ್ನು ಸ್ವರ್ಣಲತೆ ತೆಗೆದುಕೊಂಡು ಮರಳಬೇಕೆಂದಿರುವಾಗ, ಆಗಾಗಲೇ ಹಡಗು ಸಮುದ್ರ ಮಧ್ಯೆ ಇತ್ತು. ಆಕೆ ಏನು ಮಾಡಬಲ್ಲಳು? ಏನೋ ಮೋಸ ನಡೆದಿದೆಯೆಂದು ತಿಳಿದು ದುಃಖದಿಂದ ಹಾರಿ ಸಮುದ್ರದಲ್ಲಿ ಬೀಳಲು ಪ್ರಯತ್ನಿಸಿದಳು.

ಆಗ ರೂಪಧರನು ಆಕೆಯನ್ನು ಬರಸೆಳೆದು, ಮುದ್ದಿಸಿ, ತಾನು ಇಂಥ ದೇಶದ ರಾಜಕುಮಾರನೆಂದು ತಿಳಿಯಪಡಿಸಿದ. ತನ್ನ ಅರಮನೆಯಲ್ಲಿ ಆಕೆಯ ಚಿತ್ರ ಕಂಡಾಗಲಿಂದ ಅಂದಿನವರೆವಿಗೂ ನಡೆದ ಕಥೆ ಎಲ್ಲಾ ಕೇಳಿ ಸ್ವರ್ಣಲತೆಯ ಮನಸ್ಸಿಗೆ ನೆಮ್ಮದಿ ಆಯಿತು.

ಈ ರೀತಿ ರೂಪಧರನು ಆಕೆಯನ್ನು ಪುಸಲಾಯಿಸುತ್ತಿದ್ದರೆ, ಅಲ್ಲಿ ದೂರದರ್ಶಿ ಕುಳಿತಿದ್ದ ಸ್ಥಳಕ್ಕೆ ಎದುರಾಗಿ ಮೂರು ಪಕ್ಷಿಗಳು ಹಾರಿ ಬಂದು ಹೀಗೆ ಮಾತನಾಡಿಕೊಳ್ಳುತ್ತಿದ್ದವು.

"ಅಕ್ಕಾ ಈ ರಾಜಕುಮಾರನು ಕಷ್ಟಪಟ್ಟು ಸ್ವರ್ಣಲತೆಯನ್ನು ಕರೆದುಕೊಂಡು ಬಂದಿರು



ವುದೇನೋ ನಿಜ. ಆದರೆ ಆಕೆ ಆತನಿಗೆ ಲಭಿಸುವವರೆವಿಗೆ ನಂಬಿಕೆಯಿಲ್ಲ. ಏಕೆಂದರೆ ಹಡಗು ತೀರವನ್ನು ಮುಟ್ಟುತ್ತಲೇ ಒಂದು ಪಂಚಕಲ್ಯಾಣಿ ಸಿದ್ಧವಾಗಿರುತ್ತದೆ. ಅದರ ಮೇಲೆ ಹತ್ತಿ ಸವಾರಿ ಮಾಡೋಣವೆಂಬ ಬುದ್ಧಿ ರಾಜಕುಮಾರನಿಗೆ ಉಂಟಾಗುತ್ತದೆ. ಹತ್ತಿದ ತಕ್ಷಣವೇ ಆ ಕುದುರೆ ಆತನನ್ನು ಎಲ್ಲಿಗೋ ಕರೆದೊಯ್ಯುವುದು. ಅದರಿಂದಾಗಿ ಆತನಿಗೂ ರಾಜಕುಮಾರಿಗೂ ಅಗಲಿಕೆ ಉಂಟಾಗುತ್ತದೆ" ಎಂದಿತು ಅದು.

"ಹಾಗಾದರೆ ಈ ಅಪಾಯವನ್ನು ತಪ್ಪಿಸಿಕೊಳ್ಳುವ ಮಾರ್ಗವಿಲ್ಲವೇ?" ಎಂದು ಎರಡನೇ ಪಕ್ಷಿ ಕೇಳಿತು. "ಇಲ್ಲದೇನು! ಆ ಕುದುರೆಯ ಜೀನಿನಲ್ಲಿರುವ ಬಾಕು ತೆಗೆದು ಹೊಟ್ಟೆಯನ್ನು ತಿವಿದರೆ ಅದು ಸತ್ತು ಹೋಗು




ತ್ತದೆ'' ಎಂದಿತು. "ಹಾಗಾದರೆ ಈ ವಿಷಯ
ರಾಜಕುಮಾರನ ಕಿವಿಯಲ್ಲಿ ಹಾಕಿದರೆ ಆತನು
ಜಾಗರೂಕತೆಯಿಂದ ಇರಬಹುದಲ್ಲವೇ?"
ಎಂದಿತು ಎರಡನೇ ಪಕ್ಷಿ. ಅದಕ್ಕೆ ಮತ್ತೆ
ಮೊದಲನೇ ಪಕ್ಷಿ ಹೇಳಿತು "ಅಲ್ಲೇ ಇರು
ವುದು ಬಿಕ್ಕಟ್ಟು. ಈ ರಹಸ್ಯ ಆತನಿಗೆ
ಯಾರು ಹೇಳುವರೋ ಅವರು ಪಾದಗಳಿಂದ
ಸೊಂಟದವರೆವಿಗೂ ಶಿಲೆಯಾಗಿ ಬದಲಾ
ಯಿಸುವರು" ಎಂದಿತು.

ಆಗ ಎರಡನೇ ಪಕ್ಷಿ "ತಂಗೀ, ನೀನು
ಹೇಳಿದ ಗಂಡಾಂತರದಿಂದ ರಾಜಪುತ್ರ
ಹೇಗಾದರೂ ತಪ್ಪಿಸಿಕೊಳ್ಳಬಹುದು. ಆದರೆ
ನನಗೆ ತಿಳಿದಿರುವ ಪ್ರಮಾದ ಒಂದಿದೆ.
ಇವರು ಅರಮನೆಯನ್ನು ಸೇರಿದ ಕೂಡಲೇ
ಆಕರ್ಷಣೀಯವಾದ ಉಡುಪುಗಳು ಕಾಣಿ
ಸುತ್ತವೆ. ಅವುಗಳನ್ನು ಧರಿಸಿದ ಕೂಡಲೇ
ರಕ್ತ ಮಾಂಸಗಳು ಮಾಯವಾಗಿ ಬರೀ ಅಸ್ಥಿ
ಪಂಜರ ಮಾತ್ರ ಉಳಿಯುತ್ತದೆ'' ಎಂದಿತು.

"ಇದನ್ನು ತಪ್ಪಿಸಿಕೊಳ್ಳಲು ಯಾವ
ಉಪಾಯವೂ ಇಲ್ಲವೇ?" ಎಂದು ಮೊದಲನೇ
ಪಕ್ಷಿ ಕೇಳಲು "ಇಲ್ಲದೇನು? ಅವುಗಳನ್ನು
ತಕ್ಷಣ ಅಗ್ನಿಯಲ್ಲಿ ಎಸೆದು ಬೂದಿ ಮಾಡಿ
ಬಿಡಬೇಕು. ಆದರೆ ಈ ಗುಟ್ಟನ್ನು ಆತನಿಗೆ
ತಿಳಿಸಿದವರು ಸೊಂಟದಿಂದ ಕತ್ತಿನವರೆ
ವಿಗೂ ಶಿಲೆಯಾಗಿಬಿಡುತ್ತಾರೆ. ಆದ್ದರಿಂದ ಈ
ಸಂಗತಿ ತಿಳಿದು ಎಚ್ಚರಿಕೆಯಿಂದಿರಲು
ಮಾರ್ಗವಿಲ್ಲವಲ್ಲಾ ಎಂದು ಚಿಂತಿಸುತ್ತಿದ್ದೇನೆ"
ಎಂದಿತು. ಆಗ ಮೂರನೇ ಪಕ್ಷಿ "ತಂಗಿ
ಯರೇ, ಹೇಗಾದರೂ ರೂಪಧರನು ಮೊದ
ಲೆರಡು ವಿಪತ್ತುಗಳನ್ನು ತಪ್ಪಿಸಿಕೊಳ್ಳ
ಬಹುದು. ಇವುಗಳನ್ನು ಮೀರಿಸಿದ, ಭಾರಿ
ಗಂಡಾಂತರ ಒಂದಿದೆ" ಎಂದು ಹೇಳಲು
ಅದೇನೆಂಬುದನ್ನು ಹೇಳುವಂತೆ ಮಿಕ್ಕ ಪಕ್ಷಿ
ಗಳು ತೊಂದರೆ ಪಡಿಸಿದವು.

ಅದಕ್ಕೆ ಆ ಪಕ್ಷಿ "ರೂಪಧರನಿಗೂ
ಸ್ವರ್ಣಲತೆಗೂ ವಿವಾಹ ನಡೆಯುವುದು.
ತುಂಬಿದ ಸಭೆಯಲ್ಲಿ ಸಂಗೀತ ಕಛೇರಿ ನಡೆ
ಯುತ್ತಿರುವಾಗ ರಾಜಪುತ್ರಿಯು ಮುಖ
ಸೊರಗಿಹೋಗಿ ಆಕೆ ಬಿದ್ದುಬಿಡುತ್ತಾಳೆ. ಆಗ
ಯಾರಾದರೂ ಆಕೆಯನ್ನು ಎಚ್ಚರಿಸಿ
ಮುದ್ದಿಟ್ಟುಕೊಳ್ಳಬೇಕು. ಇಲ್ಲ, ಆಕೆ ಸಾಯು
ವಳು. ಆದರೆ ಈ ವಿಚಾರ ರಾಜಕುಮಾರನಿಗೆ

ತಿಳಿಯಲು ಶಕ್ಯವಿಲ್ಲ. ಹೇಳಿದವರು ಪಾದ ದಿಂದ ತಲೆಯವರೆವಿಗೂ ಕಲ್ಲಾಗಿ ರೂಪಾಂತರ ಹೊಂದುವರು" ಎಂದಿತು.

ಈ ರೀತಿ ಮಾತನಾಡುತ್ತಾ ಆ ಪಕ್ಷಿಗಳು ಹಾರಿಹೋದವು. ಇದೆಲ್ಲವನ್ನೂ ಕೇಳಿ ಮನಸ್ಸಿನಲ್ಲೇ ಇಟ್ಟುಕೊಂಡ ದೂರದರ್ಶಿ.

ಅಂದುಕೊಂಡಿದ್ದಂತೆಯೇ ಹಡಗು ತೀರವನ್ನು ಸಮೀಪಿಸಿದ ಕೂಡಲೇ ಒಂದು ಸುಂದರವಾದ ಪಂಚಕಲ್ಯಾಣಿ ದಡದಲ್ಲಿ ಸಿದ್ಧವಾಗಿತ್ತು. ರೂಪಧರನು ಅದರಮೇಲೆ ಮೋಜಾಗಿ, ಹತ್ತಿ ಕುಳಿತುಕೊಳ್ಳಲು ಹೋದ. ಆಗ ರಹಸ್ಯವನ್ನರಿತ ದೂರದರ್ಶಿ ಮುನ್ನುಗ್ಗಿ ಅದರ ಜೇನಿನಲ್ಲಿದ್ದ ಬಾಕು ತೆಗೆದು ಹೊಟ್ಟೆಗೆ ತಿವಿದನು. ಆ ಏಟಿಗೆ ಪಂಚ ಕಲ್ಯಾಣಿ ವಿಲವಿಲನೆ ಒದ್ದಾಡಿ ನೆಲದಮೇಲೆ ಕುಸಿದು ಬಿತ್ತು. ತಾನಷ್ಟು ಆಶೆಪಟ್ಟ ಕುದುರೆಯನ್ನು ಮಂತ್ರಿ ಆ ರೀತಿ ಕೊಂದುದನ್ನು ಕಂಡು ರೂಪಧರನಿಗೆ ತುಸ ಬೇಸರವೆನಿಸಿತು. ಆದರೂ ತನ್ನ ಹಿತಕ್ಕಾಗಿಯೇ ಈ ರೀತಿ ಮಾಡಿರಬಹುದೆಂದು ನಂಬಿ ಸುಮ್ಮನಿದ್ದ.

ಈ ಗಂಡಾಂತರ ತಪ್ಪಿಸಿಕೊಂಡಮೇಲೆ ಅರಮನೆ ಸೇರಿಕೊಂಡರು. ಎರಡನೇ ಪಕ್ಷಿ ಹೇಳಿದಂತೆ ಒಂದು ಕೊಠಡಿಯಲ್ಲಿ ಆಕರ್ಷಣೀಯವಾದ ಉಡುಪುಗಳು ಕಾಣಿಸಿದವು. ಅವುಗಳನ್ನು ತೆಗೆದು ಧರಿಸಿಕೊಳ್ಳಲು ರೂಪಧರ ಸಿದ್ಧನಾದ. ಆದರೆ ಆತನನ್ನೇ ಹಿಂಬಾಲಿಸುತ್ತಿದ್ದ ಮಂತ್ರಿ ಗಬಕ್ಕನೆ ಅವು



ಗಳನ್ನು ಆತನ ಕೈಯಿಂದ ಕಸಿದುಕೊಂಡು ಹೋಮಕುಂಡದಲ್ಲಿ ಹಾಕಿದ. ಅದು ಸುರ ಸುರನೆಂದು ಉರಿದು, ಒಂದು ಹಿಡಿ ಬೂದಿ ಆಯಿತು. ಈ ಅಪಶಕುನಕ್ಕಾಗಿ ರೂಪಧರ ತುಂಬಾ ನೊಂದುಕೊಂಡ. ಆದರೂ ದೂರದರ್ಶಿಯಮೇಲಿನ ನಂಬಿಕೆಯಿಂದ ಏನೂ ಮಾತನಾಡಲಿಲ್ಲ.

ನಂತರ ರೂಪಧರನಿಗೂ ಸ್ವರ್ಣಲತೆಗೂ ವೈಭವವಾಗಿ ವಿವಾಹ ನಡೆಯಿತು. ಮದುವೆಗೆ ಭಾರಿ ಸಂಗೀತ ಕಛೇರಿ ಏರ್ಪಡಿಸಿದ್ದರು. ದರ್ಬಾರಿನಲ್ಲಿ ಎಲ್ಲರ ಗಮನ ಸಂಗೀತದ ಕಡೆಗಿತ್ತು. ಆದರೆ ದೂರದರ್ಶಿಯ ನೋಟ ಮಾತ್ರ ರಾಜಕುಮಾರಿಕಡೆಗಿತ್ತು.

ಕಛೇರಿ ನಡೆಯುತ್ತಿರುವಾಗ ಸ್ವರ್ಣಲತೆ ಆಕಸ್ಮಾತ್ತಾಗಿ ಬಿದ್ದುಬಿಟ್ಟಳು. ಆಕೆಯ

ಮುಖ ಬೆಳೆಚಿಕೊಳ್ಳುತ್ತಿರುವುದು ದೂರ ದರ್ಶಿಗೆ ಮಾತ್ರ ತಿಳಿದಿದೆ. ಆತನು ಕೂಡಲೇ ಆಕೆಯನ್ನು ಎತ್ತಿ ಮುದ್ದಿಟ್ಟುಕೊಂಡ. ಆಕೆಗೆ ಮತ್ತೆ ಉಸಿರು ಬಂತು. ರೂಪಧರನಿಗೆ ಈ ಚರ್ಯೆ ಅಸಹನೀಯವಾಯಿತು. ಮರು ಆಲೋಚನೆಯಿಲ್ಲದೆ ದೂರದರ್ಶಿಯನ್ನು ಗಲ್ಲಿಗೇರಿಸುವಂತೆ ಆಜ್ಞಾಪಿಸಿದ.

ಗಲ್ಲಿಗೇರಿಸುವ ಮುನ್ನ ದೂರದರ್ಶಿ ಪಕ್ಷಿಗಳು ಹೇಳಿದ ವಿಷಯವನ್ನೆಲ್ಲಾ ಹೇಳಿದ. ಕೂಡಲೇ ಆತನು ನಿಂತಿದ್ದಂತೆಯೇ ಶಿಲಾ ವಿಗ್ರಹವಾಗಿ ಬದಲಾಯಿಸಿದ. ಇಂಥ ಆಪ್ತ ಮಂತ್ರಿಯನ್ನು ಕಳೆದುಕೊಂಡಿದ್ದಕ್ಕೆ ರೂಪಧರ ತುಂಬಾ ಸಂತಾಪಗೊಂಡ. ಆ ವಿಗ್ರಹವನ್ನು ತನ್ನ ಶಯನಾಗಾರದಲ್ಲಿಡಿಸಿ 'ಎಂದಿಗಾದರೂ ಶಾಪ ವಿಮುಕ್ತನಾಗಿ ದೂರದರ್ಶಿ ನನಗೆ ಲಭಿಸಲಾರನೇ' ಎಂದು ವಿಲಪಿಸುತ್ತಿದ್ದ.

ಕೆಲಕಾಲವಾದಮೇಲೆ ಒಂದು ದಿನ ಹಿಂದೆ ಕಾಣಿಸಿಕೊಂಡ ಮೂರು ಪಕ್ಷಿಗಳು ಬಂದು ಆ ಶಿಲಾಪ್ರತಿಮೆಯಮೇಲೆ ಕುಳಿತುಕೊಂಡವು. ಅವು ಮಾನವ ಭಾಷೆಯಲ್ಲಿ ಈ ರೀತಿ ಮಾತನಾಡಿಕೊಳ್ಳುತ್ತಿದ್ದವು. "ನಿಜವಾದ ಅಭಿಮಾನವೇ ಇದ್ದರೆ ರಾಜನು ತನ್ನ ಪ್ರಿಯವಾದ ವಸ್ತುವೊಂದನ್ನು ಅರ್ಪಿಸಿದ ಪಕ್ಷಕ್ಕೆ ಮಂತ್ರಿ ಬದುಕುತ್ತಾನೆ" ಎಂದಿತು ಮೊದಲನೇ ಪಕ್ಷಿ. "ಆ ವಸ್ತುವೇನು?" ಎಂದು ಎರಡನೆಯ ಪಕ್ಷಿ ಕೇಳಲು, ಮೊದಲನೇ ಪಕ್ಷಿ ಹೀಗೆಂದಿತು "ಮಗನನ್ನು ಬಲಿಕೊಟ್ಟು ಆ ರಕ್ತವನ್ನು ವಿಗ್ರಹಕ್ಕೆ ಅಭಿಷೇಕ ಮಾಡಬೇಕು" ಎಂದಿತು.

ಸನಿಯದಲ್ಲೇ ಆಟವಾಡಿಕೊಳ್ಳುತ್ತಿದ್ದ ತನ್ನ ಏಕಮಾತ್ರ ಪುತ್ರನನ್ನು ರೂಪಧರನು ವಿಗ್ರಹದ ಹತ್ತಿರ ತಂದು, ಖಡ್ಗವನ್ನು ಮೇಲೆತ್ತಿದ. ಆತನು ಖಡ್ಗವನ್ನು ಮೇಲೆತ್ತಿದಾಗ ಯಾರೋ ಆತನ ಕೈ ಹಿಡಿದುಕೊಂಡಂತೆ ಭಾಸವಾಯಿತು. ತಲೆ ಎತ್ತಿ ನೋಡಲು ಪಕ್ಷಿಗಳು ಮೂರು ಅಲ್ಲಿರಲಿಲ್ಲ. ಆ ಸ್ಥಳದಲ್ಲಿ ತ್ರಿಮೂರ್ತಿಗಳು ನಿಂತಿದ್ದಾರೆ. ಮರು ಕ್ಷಣದಲ್ಲಿ ಅವರು ಅದೃಶ್ಯರಾದರು. ಮಾಮೂಲು ರೂಪದಲ್ಲಿ ಮಂತ್ರಿ ದೂರದರ್ಶಿ ಆತನ ಕೈಹಿಡಿದುಕೊಂಡಿದ್ದಾನೆ! ಖಡ್ಗ ಕೆಳಗೆಬಿತ್ತು. ಇಬ್ಬರೂ ಪ್ರೇಮದಿಂದ ಒಬ್ಬರನ್ನೊಬ್ಬರು ಬಾಚಿ ತಬ್ಬಿಕೊಂಡರು.






ಭದ್ರಾಚಲ ಪ್ರಾಂತವೆಲ್ಲಾ ಗುಡ್ಡಗಾಡು. ಇದು ದಾರಿಯೇ ಕಾಣದಂತಹ ದಟ್ಟಡವಿಗಳಿಂದಲೂ, ಕಾಗೆಗಳು ಹಾರಲಾರದಂತಹ ಗಗನ ಮುಟ್ಟುವ ವೃಕ್ಷಗಳಿಂದಲೂ ತುಂಬಿವೆ. ಆ ಅರಣ್ಯಗಳಲ್ಲಿ ಬ್ರಹ್ಮಾಂಡವಾದ ವೃಕ್ಷಗಳು ಮುಗಿಲನ್ನು ಮುಟ್ಟುತ್ತಾ ಹಗಲು ಹೊತ್ತಿನಲ್ಲೇ ಕಾರ್ಗತ್ತಲೆಯಾಗಿರುತ್ತದೆ.

ಇಂತಹ ಅರಣ್ಯಗಳಲ್ಲಿ ಹುಲಿಗಳೂ, ಚಿರತೆಗಳೂ, ಕರಡಿಗಳೂ, ತೋಳಗಳೂ ಮುಂತಾದ ಕಾಡು ಮೃಗಗಳು ಸ್ವೇಚ್ಛೆಯಾಗಿ ಸಂಚರಿಸುತ್ತಿರುತ್ತವೆ. ನಾಗರ ಹಾವುಗಳು ಬುಸಗುಟ್ಟುತ್ತಾ ಹೆಡೆ ಎತ್ತಿಕೊಂಡು ವಿಹರಿಸುತ್ತಿರುತ್ತವೆ. ಮಹಾವೃಕ್ಷಗಳ ಮೇಲೆ ಸಮಸ್ತವಾದ ಪಕ್ಷಿಜಾತಿಗಳೂ ಗೂಡು ಕಟ್ಟಿ ವಾಸಮಾಡುತ್ತಿರುತ್ತವೆ.

ಅರಣ್ಯದಲ್ಲಿ ಓಡಾಡುವ ಕಾಡು ಮೃಗಗಳನ್ನೂ ನಾಗರ ಹಾವುಗಳನ್ನೂ, ಪಕ್ಷಿಗಳನ್ನೂ ಕೊಲ್ಲುವುದೆಂದರೆ ಜಮೀನುದಾರರಿಗೂ ಆಂಗ್ಲ ದೊರೆಗಳಿಗೂ ತುಂಬಾ ಮೋಜು. ಅವರಿಗೆ ಬೇಟೆ ಎಂಬುದು ಒಂದು ಆಟದಂತೆ. ಮುಖ್ಯವಾಗಿ ರಜಾದಿನ, ಭಾನುವಾರಗಳು ಬಂದವೆಂದರೆ ಬೇಟೆಗೆ ಹೋಗದಿದ್ದರೆ ಪರಂಗಿಯವರಿಗೆ ತುಂಬಾ ಬೇಸರವೆನಿಸುತ್ತದೆ. ಬೇಟೆಗೆ ಹೋಗಿ ಬಂದು ಮೃಗವನ್ನು ಕೊಂದರೆ ಅವರಿಗೆ ತಮ್ಮ ಮೋಜು ತೀರುವುದು ಮಾತ್ರವಲ್ಲದೆ ತುಂಬಾ ಕೀರ್ತಿ ಸಹ ಬರುತ್ತದೆ. 'ಆಹಾ, ನಮ್ಮ ಸಾಹೇಬರು ಕಾಡು ಹಂದಿ ಸಾಯಿಸಿದರು' ಎಂದು ಜನ ಆತನ ಧೈರ್ಯ, ಸಾಹಸಗಳನ್ನು ಕುರಿತು ಮಾತನಾಡಿಕೊಳ್ಳುವುದೇ ಅಲ್ಲದೆ, ಸಾಹೇಬನನ್ನು ಬಾಯಿ ತುಂಬಾ ಹೊಗಳುವರು.

ಆದರೆ ಬೇಟೆಗಾರರಿಗೆ ಸಾಮಾನ್ಯವಾಗಿ ಅಡವಿಗಳಿಗೆ ಹೋಗಿ ಇಷ್ಟಬಂದ ಮೃಗಮೃಗಗಳನ್ನೂ, ಪಕ್ಷಿಗಳನ್ನೂ ಕೊಂದು ತರಬಲ್ಲ ಚೈತನ್ಯವಿರುವುದಿಲ್ಲ. ಅಡವಿಗಳಲ್ಲಿ ಮೃಗಗಳ ಚಲನವಲನಗಳನ್ನು ಅರಿತ ಕೆಲ ಜನರಿರುತ್ತಾರೆ. ಅವರನ್ನು 'ಷಿಕಾರಿ'ಗಳೆನ್ನುವರು. ಈ ಷಿಕಾರಿಗಳು ಜಂತುಗಳ ಸುಳಿವು

ಟಿ. ಸಾವಿತ್ರಿ.



ಹೇಳಿದರೆ, ಬೇಟೆಗಾರರು ಹೊಂಚಿಕೊಂಡಿದ್ದು ಅವುಗಳನ್ನು ಹೊಡೆಯುವರು.

ಒಂದುಸಾರಿ ಮಾಯಾವರದಿಂದ ತಂಗ ವೇಲು ಅಂತ ಒಬ್ಬ ಶಿಕಾರಿ ಬಂದು, ಭದ್ರಾ ಚಲ ಪ್ರಾಂತದಲ್ಲಿ ಒಂದು ಗುಡ್ಡದ ಮೇಲೆ ಮನೆ ಮಾಡಿಕೊಂಡು ನಿಂತ. ಬಂದ ಲಾಗಾ ಯ್ತು ಆತನು ಹೆಸರು ವಾಸಿಯಾದ. ಅದ ರಿಂದ ಸಾಹೇಬರುಗಳೆಲ್ಲಾ ತಂಗವೇಲು ಸಲಹೆ ಪಡೆಯುವರು. ಮಿಕ್ಕ ಶಿಕಾರಿಗಳು ಎರಡಾಣೆಯೋ, ನಾಲ್ಕಾಣೆಯೋ ಕೈಯ ಲ್ಲಿಟ್ಟರೆ ಸಾಕು. ತಿಂಡಿ ತೀರ್ಥಗಳಿಲ್ಲದೆ ಬೆಳಗಿ ನಿಂದ ಸಂಜೆಯವರೆಗೆ ಸಾಹೇಬರ ಹಿಂದೆ ಸೇವಕರಂತೆ ತಿರುಗುವರು. ಆದರೆ ತಂಗವೇಲು ಆ ರೀತಿಯಲ್ಲ. ಯಾರೇ ಆಗಲೀ ಆತನ ಮನೆಗೆ ಬಂದು ಸಲಹೆ ಪಡೆಯಬೇಕು, ಅಷ್ಟೇ.

ತಂಗವೇಲು ಗುಡ್ಡದಮೇಲಿರುವ ತನ್ನ ಕುಟೀರದಿಂದ ಕದಲುತ್ತಿರಲಿಲ್ಲ. ಅಲ್ಲೇ ಕುಳಿತುಕೊಂಡು, ಜೋತಿಷ್ಕನಂತೆ ಕಾಡು ಮೃಗಗಳ ಚಲನ ವಲನಗಳನ್ನು 'ಚ, ಚು' ತಪ್ಪದೆ ಹೇಳಬಲ್ಲನು. 'ಇಂಥ ಅಡವಿಯಲ್ಲಿ ಇಂಥ ಕಡೆಯಿಂದ ಪೂರ್ವ ದಿಕ್ಕಿನಲ್ಲಿರುವ ಝರಿಗೆ, ಇಷ್ಟು ಅಡಿ ಎತ್ತರ, ಇಷ್ಟು ಅಡಿ ಉದ್ದವಿರುವ ದೊಡ್ಡ ಹುಲಿಯೊಂದು ಸಾಯಂಕಾಲ ಮೂರು ಗಂಟೆ ಇಪ್ಪತ್ತು ನಿಮಿಷಕ್ಕೆ ಬಾಯಾರಿಕೆ ತೀರಿಸಿಕೊಳ್ಳಲು ಬರುತ್ತದೆ' ಎಂದು ತಂಗವೇಲು ಮೊದಲೇ ವಿವರವಾಗಿ ಹೇಳಿಬಿಡುವನು. ಬೇಟೆಗಾರರು ಗಡಿಯಾರ ನೋಡಿಕೊಂಡು ಆ ಸಮಯ ಆ ದಿಕ್ಕಿಗೆ ಹೋಗಿ ಕಾದುಕೊಂಡಿದ್ದರೆ, ಆತನು ಹೇಳಿದಂತೆ ಒಂದು ಭಾರಿ ಹುಲಿ ಖಂಡಿತ ಬಂದೇ ಬರುತ್ತದೆ.

ಈ ರೀತಿ ತಂಗವೇಲು ಹೇಳಿದಂತೆ ಬೇಟೆ ಗಾರರು ಜಂತುಗಳನ್ನು ಹಿಡಿಯಲು ಹೋಗು ತ್ತಿದ್ದರು. ಆದರೆ ಅದೇನು ವಿಚಿತ್ರವೋ, ಎಷ್ಟು ದಿನವಾದರೂ ಒಂದು ಮೃಗವಾದರೂ ಬೇಟೆಗಾರರಿಗೆ ಸಿಗಲಿಲ್ಲ.

ಒಂದು ಸಾರಿ ಒಬ್ಬ ಜಮೀನುದಾರರು ತಂಗವೇಲು ಹತ್ತಿರ ಬಂದು ಸಲಹೆ ಪಡೆದರು. ತಂಗವೇಲು ವಾಸವಾಗಿದ್ದ ಗುಡ್ಡದ ಎದುರಿ ನಲ್ಲಿದ್ದ ಬೆಟ್ಟಗಳ ಮಧ್ಯೆ ಒಂದು ನದಿಯಿದೆ. ಸದಾ ಆ ನದಿಯ ಈಚೆ ದಡದಿಂದಲೇ ಗುರಿ ಯಿಟ್ಟು ಹೊಡೆಯುವಂತೆ ತಂಗವೇಲು ಬೇಟೆ

ಗಾರರಿಗೆ ಸಲಹೆ ಕೊಡುತ್ತಿದ್ದ. ಈಗಲೂ ಸಹ ಜಮೀನುದಾರರಿಗೆ ಅದೇ ರೀತಿ ಸಲಹೆ ಕೊಟ್ಟ.

ಆದರೆ ನಾವೀ ದಡದಮೇಲಿರುವುದರಿಂದ ಗುರಿ ತಪ್ಪಿಹೋಗಬಹುದು. ಆಚೆ ದಡವನ್ನು ಸೇರಿ ಗುರಿಯಿಟ್ಟು ಹೊಡೆದರೆ, ಒಂದು ವೇಳೆ ಗುರಿ ತಪ್ಪಿ ಜಂತು ಓಡಿಹೋದರೂ ಅದನ್ನು ಅಟ್ಟಿಸಿಕೊಂಡು ಹೋಗಿ ಕೊಲ್ಲಬಹುದು' ಎಂದುಕೊಂಡು ಆ ಜಮೀನುದಾರನು ನದಿ ದಾಟಿ, ಆಚೆ ದಡಕ್ಕೆ ಹೋಗಿ ಕಾದುಕೊಂಡಿದ್ದ. ತಂಗವೇಲು ಹೇಳಿದಂತೆ ಸರಿಯಾಗಿ ನಾಲ್ಕು ನಲವತ್ತು ನಿಮಿಷಗಳಿಗೆ ಒಂದು ಹುಲಿ ಹೊರಗೆ ಬರಬೇಕಾಗಿತ್ತು. ಅದು ಎರಡು ಹೆಜ್ಜೆ ಮುಂದಿಟ್ಟಿತೋ ಇಲ್ಲವೋ ಜಮೀನು ದಾರ 'ಡಾಂ' ಎಂದು ಗುಂಡು ಹಾರಿಸಿದ.

ಆ ಏಟಿಗೆ ಹುಲಿ "ಅಯ್ಯೋ, ಅಪ್ಪಾ, ಹೊಡಿಬೇಡಿ, ನಿಮ್ಮ ಪುಣ್ಯ" ಎಂದು ಅರಚುತ್ತಾ ಕೆಳಗೆ ಬಿದ್ದುಹೋಯಿತು. ಈ ವಿಸ್ಮಯ ಕಂಡು ಜಮೀನುದಾರನು ಪರಿವಾರ ಸಮೇತ ಹತ್ತಿರಕ್ಕೆ ಹೋಗಿ ನೋಡಲು, ಹುಲಿ ಚರ್ಮವನ್ನು ಹರಿದುಕೊಂಡು ಒಬ್ಬ ಮನುಷ್ಯನು ಹೊರಬಿದ್ದ. ಅವನ ಕಾಲಿಗೆ ಏಟುಬಿದ್ದು ರಕ್ತಮಯವಾಗಿಬಿಟ್ಟಿತ್ತು. ಜಮೀನುದಾರನು ಗಾಯಗಳಿಗೆ ಔಷಧಿ ಹಚ್ಚಿ ಕಟ್ಟುಬಿಗಿದ.

ತರುವಾಯ ಅವನನ್ನು ವಿಷಯವೇನೆಂದು ಕೇಳಲು, "ಸ್ವಾಮಿ ನಾವು ತಂಗವೇಲು



ನೌಕರರು. ಮೂರು ತಲೆ ಮಾರಿನವರೆವಿಗೆ ಸಾಕಾಗುವಷ್ಟು ಹಣ ನಮಗೆ ಆತ ಕೊಟ್ಟಿದ್ದಾನೆ. ಅದಕ್ಕೆಂತಲೇ ನಾವು ಪ್ರಾಣದಾಶೆಯಿಲ್ಲದೆ ಈ ರೀತಿ ಕಾಡು ಮೃಗಗಳ ವೇಷದಲ್ಲಿ ಸಂಚರಿಸುತ್ತಿರುವೆವು. ಯಜಮಾನ ನಮಗೆ ಆಯಾ ದಿನ ಮುಂಜಾನೆ ಯಾರು ಯಾರು ಯಾವ ಯಾವ ಪ್ರಾಣಿಯ ಚರ್ಮವನ್ನು ತಗಲಿಸಿಕೊಂಡು ಎಷ್ಟು ಗಂಟೆಗೆ ಯಾವ ಜಾಗಕ್ಕೆ ಬರಬೇಕೋ, ಹೇಳುವನು. ಆ ಪ್ರಕಾರ ನಾವು ಇಲ್ಲಿ ಸಂಚರಿಸಬೇಕು" ಎಂದು ವಿಚಿತ್ರವಾದ ತನ್ನ ಚರಿತ್ರೆ ಹೇಳಿದ.

ಮರುದಿನ ಜಮೀನುದಾರ ತಂಗವೇಲು ಮನೆಗೆ ಹೋದ. ಆದರೆ ಆ ವೇಳೆಗಾಗಲೇ ಆತನ ಮನೆ ಖಾಲಿಯಾಗಿತ್ತು.




## ತತ್ವಜ್ಞಾನಿಗಳು

ಮಿಥಿಲಾಪಟ್ಟಣವನ್ನು ಆಳಿದ ಜನಕಮಹಾರಾಜನು ಒಬ್ಬ ಮಹಾ ತತ್ವಜ್ಞಾನಿ. ಆತನ ರಾಜ್ಯದಲ್ಲಿ ಹೆಂಗಸರು ಮಕ್ಕಳೂ ಸಹ ತತ್ವಜ್ಞಾನಿಗಳು ಎಂದು ಕೊಳ್ಳುತ್ತಿದ್ದರು. ಈ ಮಾತಿನ ನಿಜಾಂಶವನ್ನು ತಿಳಿಯಲು ಒಂದು ಸಲ ನಾರದನು ಮಿಥಿಲಾನಗರವನ್ನು ಸೇರಿದ.

ಆಯಾಸದಿಂದ ನಾರದಮುನಿ ಕೈಯನ್ನು ತಲೆಕೆಳಗಿಟ್ಟುಕೊಂಡು ಒಂದು ಮರದ ನೆರಳಿನಲ್ಲಿ ವಿಶ್ರಮಿಸಿಕೊಳ್ಳುತ್ತಿದ್ದ. ಸ್ವಲ್ಪದೂರದಲ್ಲಿ ಒಂದು ಸರೋವರವಿತ್ತು. ಸುತ್ತಮುತ್ತಲಿರುವ ಹೆಣ್ಣುಮಕ್ಕಳು ಹರಟೆ ಕೊಚ್ಚುತ್ತಾ ಅಲ್ಲಿಗೆ ಬಂದು ನೀರು ತೆಗೆದುಕೊಂಡು ಹೋಗುತ್ತಿದ್ದರು. ಅವರಲ್ಲಿ ಒಬ್ಬಾಕೆ ಸರೋವರದಕಡೆ ಹೋಗುತ್ತಾ ಮರದ ಕೆಳಗೆ ಮಲಗಿದ್ದ ನಾರದನನ್ನು ಕಂಡು "ಇಲ್ಲಿ ನೋಡಕ್ಕ, ಈತನ ವೇಷ ನೋಡಿದರೆ ಮಹಾಮುನಿಯಂತೆ ಕಾಣಿಸಿದರೂ, ತಲೆದಿಂಬಿಲ್ಲದೆ ಈತನಿಗೆ ನಿದ್ದೆ ಬರೋಲ್ಲ ಅಂತ ಕಾಣಿಸುತ್ತದೆ. ಕೈಯನ್ನು ತಲೆದಿಂಬಾಗಿ ಮಾಡಿಕೊಂಡು ಎಷ್ಟು ಸುಖವಾಗಿ ಮಲಗಿದ್ದಾನೆ. ಪಾಪ, ಈತನಿಗೆ ಎಲ್ಲಾ ಉಡುಗಿಹೋಗಿದ್ದರೂ ದೇಹಾಭಿಮಾನ ಮಾತ್ರ ಇನ್ನೂ ಹೋದಂತೆ ಕಾಣಲಿಲ್ಲ" ಎಂದು ತನ್ನ ಸಖಿಯೊಂದಿಗೆ ಹೇಳುತ್ತಾ ಹೋದಳು.

ಈ ಮಾತು ಕಿವಿಗೆ ಬಿದ್ದಕೂಡಲೇ ನಾರದ ಟಿಕ್ಕನೆ ತಲೆ ಕೆಳಗಿರಿಸಿದ್ದ ಕೈ ತೆಗೆದು, ಏನೂ ಅರಿಯದವನಂತೆ ಮಲಗಿದ್ದ. ಹಿಂದೆ ಹೇಳಿದ ಹೆಂಗಸರು ನೀರು ತುಂಬಿಕೊಂಡು ಹಿಂದಿರುಗಿ ಬರುವಾಗ ಮತ್ತೆ ಆತನ ಕಡೆ ನೋಡಿದರು. ಹಿಂದೆ ಮಾತಾಡಿದಾಕೆಯೇ ಅಂದಳು. "ನೋಡಿದೆಯೇನೇ ಅಕ್ಕ, ಈ ಯತೀಶ್ವರನಿಗೆ ದೇಹಾಭಿಮಾನ ಮಾತ್ರವೇ ಅಲ್ಲ. ಅಸಲು ಆತ್ಮಾಭಿಮಾನವೇ ಸತ್ತಿಲ್ಲ. ನಾವು ಆಗ ಅಂದ ಮಾತುಗಳಿಗೆ ಅಭಿಮಾನಪಟ್ಟು ತಲೆ ಕೆಳಗಿರಿಸಿದ್ದ ಕೈ ತೆಗೆದುಬಿಟ್ಟಿದ್ದಾನೆ. ಇಷ್ಟೊಂದು ಅಹಂಭಾವವಿರುವಾತ ಒಬ್ಬ ಋಷಿಯೇ?" ಎಂದು ಪರಿಹಾಸಮಾಡಿದಳು.

ಹೀಗೆಂದು ಮಾತನಾಡುತ್ತಾ ಮುಸಿಮುಸಿ ನಗುತ್ತಾ ಅವರು ಹೊರಟು ಹೋದರು. ಆಶ್ಚರ್ಯಪಟ್ಟು ನಾರದ, ಯಾರ ಕಣ್ಣಿಗೂ ಬೀಳದೆ ತನ್ನ ಲೋಕಕ್ಕೆ ಪರಾರಿಯಾದ.

## ಬದುಕಿ ಕೆಟ್ಟವನು

ವೆಂಕಟಪ್ಪ ಹಿಂದು ಕಾಲದಲ್ಲಿ ಚೆನ್ನಾಗಿ ಬದುಕಿ ಬಾಳಿದವ. ದೇಹಿ ಅಂತ ಒಬ್ಬರಿಗೆ ಕೈಚಾಚಿದವನಲ್ಲ. ಒಬ್ಬರಿಂದಲೂ ಹಿಂದು ಮಾತು ಅನ್ನಿಸಿಕೊಂಡವನಲ್ಲ. ಆದರೆ ಕಾಲ ಯಾವಾಗಲೂ ಒಂದೇ ರೀತಿ ಇರುವುದಿಲ್ಲ ವಷ್ಟೆ? ಚೆನ್ನಾಗಿ ಬಾಳಿದ ರೆಡ್ಡಿಯ ಸ್ಥಿತಿಗತಿ ಗಳು ತಿರುವುಮುರುವಾಗಿ, ಹೊತ್ತಿಗೆ ಊಟ ಸಿಗುವುದು ದುಸ್ತರವಾಯಿತು. ಇಂಥ ಹೀನ ಸ್ಥಿತಿಯೊದಗಿದರೂ ತಲೆ ತಗ್ಗಿಸಲಿಲ್ಲ ರೆಡ್ಡಿ. ಉಪವಾಸವಾದರೂ ಇರುತ್ತಿದ್ದನೇ ಹೊರತು ಒಬ್ಬರನ್ನು ಆಶ್ರಯಿಸುತ್ತಿರಲಿಲ್ಲ.

ಒಂದು ದಿನ ಬೆಳಗ್ಗೆ ರೆಡ್ಡಿ ಬೀದಿ ಜಗಲಿಯ ಮೇಲೆ ಕುಳಿತಿರಲು, ತರಕಾರಿ ಮಾರುವಾಕೆ ಅತ್ತ ಹಾದು ಹೋಗುತ್ತಿದ್ದಳು. "ಏನಮ್ಮಾ, ಬದನೆಕಾಯಿ ಹೇಗೆ?" ಎಂದು ಕೇಳಿದ ರೆಡ್ಡಿ. "ವೀಸೆ ಐದಾಣೆ ಸೋಮಿ" ಎಂದಳಾಕೆ. "ತುಂಬಾ ಹೆಚ್ಚು ಆಯಿತು. ಮೂರಾಣೆಗೆ ಕೊಡೋಲ್ಲವೇ?" ಎಂದು ಮತ್ತೆ ಕೇಳಿದ ರೆಡ್ಡಿ. "ಒಸಿ, ಬಿಡಯ್ಯಾ, ಕಂಡವ್ರೆ ನೀನು ಕೊಳ್ಳೋದನ್ನು. ಮೂರಾಣೆ ಅಲ್ಲ, ಮೂರು ಕಾಸಿಗೆ ಕೊಟ್ಟರೂನೂ ನೀನು ತೆಗೆದು ಕೊಳ್ಳೋದು ಅಷ್ಟರಾಗೇ ಅದೆ" ಎಂದೆನ್ನುತ್ತಾ ಆಕೆ ಹೋದಳು. ರೆಡ್ಡಿಯ ಹೃದಯಕ್ಕೆ ಈ ಮಾತುಗಳು ಶಲ್ಯದಂತೆ ಚುಚ್ಚಿಕೊಂಡಿತು. 'ಮಾನ ಮರ್ಯಾದೆ ಹೋದಮೇಲೆ ಬದುಕಿದ್ದರೇನು, ಸತ್ತರೇನು?' ಎಂದುಕೊಂಡು ಮೂಲೆಯಲ್ಲಿದ್ದ ದುಂಡು ಕೋಲಿನಿಂದ, ಆ ಹೆಂಗಸಿನ ತಲೆಗೆ ಒಂದು ಹಾಕಿದ. ಆ ಏಟಿಗೆ ಆಕೆ ಗುಟುಕ್ ಎಂದು ಪ್ರಾಣಬಿಟ್ಟಳು.

ವೆಂಕಟ ರೆಡ್ಡಿ ನೆಟ್ಟಗೆ ಪೋಲೀಸು ಠಾಣೆಗೆ ಹೋಗಿ ನಡೆದುದನ್ನು ಹೇಳಿದ. ಇನ್ಸ್ಪೆಕ್ಟರು ಅಚ್ಚರಿಗೊಂಡ. "ಒಳ್ಳೇ ಹುಂಬಕಣಯ್ಯಾ ನೀನು. ಈ ಮಾತ್ರಕ್ಕೆ ಇಷ್ಟು ದುಡುಕು ವುದೇ?" ಎಂದ. "ನನ್ನ ಸಂಕಟ ನೀವು ತಿಳಿಯಲಾರಿರಿ" ಎಂದ ರೆಡ್ಡಿ ಹೆದರದೆ. "ನಿನ್ನನ್ನು ಗಲ್ಲಿಗೇರಿಸುವರು ಗೊತ್ತೋ?" ಎಂದ ಇನ್ಸ್ಪೆಕ್ಟರು. "ಗೊತ್ತು. ಈ ಹಿಡಿ ಪ್ರಾಣವಿದ್ದರೆಷ್ಟು, ಬಿಟ್ಟರೆಷ್ಟು, ಇಷ್ಟೊಂದು ಪರಾಭವ ಹೊಂದಿದಮೇಲೆ" ಎಂದ ರೆಡ್ಡಿ. ಕೆಲದಿನಗಳನಂತರ ರೆಡ್ಡಿಯನ್ನು ಗಲ್ಲಿಗೇರಿಸಿದರು. ಜನರೆಲ್ಲಾ 'ಪಾಪ, ಬದುಕಿ ಕೆಟ್ಟವನು' ಎಂದು ಸಹಾನುಭೂತಿ ವ್ಯಕ್ತಪಡಿಸಿದರು.

ಮಳೆ ಬಂತು ಜೋರಾಗಿ
ನೀರ್ ಬಂತು ಹೊಳೆಯಾಗಿ
ಬೆಳೆ ಬೆಳೆದು ಹಸುರಾಗಿ
ಸುಖ ಬಂತು ಪೈರಾಗಿ.

—ಯು. ಚಿತ್ರಲೇಖಾನಾಯಕ್

ನನಗೆ ಒಬ್ಬ ದೋಸ್ತಿ
ಅವನ ಹೆಸರು ನಾಸ್ತಿ
ಅವನಿಗಿಲ್ಲ ಆಸ್ತಿ
ಜಂಬಮಾತ್ರ ಜಾಸ್ತಿ

—ಜಗನ್ನಾಥ




ರಾಮರಾವಣ ಯುದ್ಧ ಮುಗಿಯಿತು. ಮುಗಿದುದು ಮಾತ್ರವೇ ಅಲ್ಲ. ಶ್ರೀರಾಮನು ರಾಮಾವತಾರ ಮುಗಿಸಿ, ಕೃಷ್ಣಾವತಾರವೆತ್ತಿದ.

ಅದು ಉತ್ತುಂಗ ಮಹಾತರಂಗಗಳಿಂದ ಕೂಡಿದ್ದ ಸಮುದ್ರತೀರ. ಆ ಸಮುದ್ರತೀರಕ್ಕೆ ಬಂದು ನೋಡುತ್ತಿದ್ದ ಅರ್ಜುನ. "ಈ ಸಮುದ್ರಕ್ಕೇ ಇರಬಹುದು, ರಾಮನು ಜಮಾಯಿಸಿ ತಂದ ಕಪಿಶ್ರೇಷ್ಠರೆಲ್ಲಾ ಲಂಕೆಗೆ ಸೇತುವೆ ಕಟ್ಟಿದುದು. ಕಪಿಗಳ ಸಹಾಯವಿಲ್ಲದೆ ಒಂದು ಹೆಜ್ಜೆಯಾದರೂ ಹಾಕಲಾರದಾದನಲ್ಲಾ ಶ್ರೀರಾಮ. ನಾನೇ ಆಗಿದ್ದರೆ? ಎರಡು ನಿಮಿಷಗಳಲ್ಲಿ ನನ್ನ ಶರಪರಂಪರೆಯಿಂದ ಸೇತುವೆ ನಿರ್ಮಿಸುತ್ತಿದ್ದೆ. ಇಷ್ಟು ಮಾತ್ರ ಕೆಲಸಕ್ಕೆ ಆ ಮರ್ಕಟವೀರರು ಮಹಾ ಪರ್ವತಗಳನ್ನು ಉರುಳಿಸಿಕೊಂಡು ಬಂದು ತುಂಬಾ ಅವಸ್ಥೆ ಪಟ್ಟರು" ಎಂದು ಒಂದು ವಿಧವಾಗಿ ಆತ್ಮಸ್ತುತಿಯನ್ನೂ ಪರನಿಂದೆಯನ್ನೂ ಮಾಡುತ್ತಾ ಕುಳಿತಿದ್ದ.

ಅಷ್ಟರಲ್ಲಿ ರಾಮನಿಂದೆಯನ್ನು ಕೇಳಿ ಅಲ್ಲಿಗೆ ಬಂದ ಆಂಜನೇಯ. "ಯಾರಯ್ಯಾ ನೀನು. ಏನು ಹೇಳುತ್ತಿರುವೆ?" ಎಂದು ಗದರಿಸಿದ. ಭುಜದಮೇಲಿಂದ ಗದೆಯನ್ನು ಕೆಳಗಿಳಿಸುತ್ತಾ.

'ಈ ಕಪಿ ಏನೋ ಕಿರಿಚುತ್ತಿದೆಯಲ್ಲಾ? ಸೇತುವೆಯ ರಕ್ಷಣೆಗಾಗಿ ಅದು ಈ ರೀತಿ ತಿರುಗಾಡುತ್ತಿರಬಹುದು' ಎಂದು ಅಂದುಕೊಂಡ ಅರ್ಜುನ. ಹೀಗೆಂದುಕೊಳ್ಳುತ್ತಾ ಹೊರಗೆ ಮಾತ್ರ ಆಂಜನೇಯನ ಪ್ರಶ್ನೆಗೆ ಉತ್ತರವಾಗಿ "ಏನಿಲ್ಲ, ನಿನ್ನ ರೂಪ ಎಷ್ಟೊಂದು ಸುಂದರವಾಗಿರುವುದೋ ವರ್ಣಿಸುತ್ತಿದ್ದೇನೆ" ಎಂದ.

ಈ ಮಾತಿಗೆ ಆಂಜನೇಯ ಉಗ್ರನಾದ. "ಏನು ನನ್ನನ್ನು ಅಣಕಿಸುವೆಯಾ? ಈ ಗದೆ ನಿನ್ನ ಶಿರಸ್ಸನ್ನು ಸಾವಿರ ಹೋಳುಗಳಾಗಿ ಮಾಡುತ್ತೆ ಹುಷಾರ್" ಎಂದು ಎಚ್ಚರಿಕೆ ಕೊಟ್ಟ.

"ಅದೆಲ್ಲಾ ಇರಲಿ. ಮೊದಲು ನೀನು ಯಾರೋ ಹೇಳು. ಪಾಂಡವ ಮಧ್ಯಮನಾದ

ಬಿ. ಸಿ. ರಂಗನಾಥನ್.

ಅರ್ಜುನ ಕೇಳುತ್ತಿದ್ದಾನೆ" ಎಂದ ಗಾಂಡೀವ ವನ್ನು ಝಂಕರಿಸುತ್ತಾ. "ಓ ನಮ್ಮ ಭೀಮನ ಸಹೋದರನೇ? ಮೊದಲಸಾರಿ ತಪ್ಪೆಂದು ಈ ಬಾರಿ ಕ್ಷಮಿಸಿದ್ದೇನೆ. ಇನ್ನುಮೇಲೆ ನಮ್ಮ ರಾಮನನ್ನು ದೂಷಣೆ ಮಾಡಿದೆಯೋ ನನ್ನ ಬಾಲ ನಿನ್ನ ಕೊರಳನ್ನು ಸುತ್ತುತ್ತದೆ"ಎಂದ ಹನುಮಂತ.



"ಓಹೋ, ರಾಮನ ಬಲಭುಜನಾದ ವಾಯುಸುತನೋ ನೀನು? ನೋಡಿದ ಕೂಡಲೇ ಹಾಗೆಂತ ಅಂದುಕೊಂಡೆ. ಅಲ್ಲ. ಸೇತುವೆ ಕಟ್ಟಲು ನೀನು ಹೊರಲಿಲ್ಲವೇ ನಯ್ಯಾ ಪರ್ವತಗಳನ್ನು! ಕೈಯಲ್ಲಿದ್ದ ಬತ್ತಳಿಕೆಯಿಂದ ಸೇತುಬಂಧನ ಮಾಡಲಾರದೆ ಪರ್ವತಗಳಿಗಾಗಿ ಓಡಾಡಿಸಿದ ಆ ಕೈಲಾಗದ ಪ್ರಭುವನ್ನು ನೀವು ಹೇಗೆ ತಾನೇ ಸೇವಿಸಿದರೋ ಅಪ್ಪಾ!" ಎಂದ ಕಿರೀಟಿ. "ಆ....ಆ ನನ್ನ ಪ್ರಭುವನ್ನು ಪರಿಹಾಸಮಾಡುವೆಯಾ?" ಎಂದು ಗದೆಯನ್ನು ಭುಜದಮೇಲೆತ್ತಲು ಅನುವಾದ ಆಂಜನೇಯ.

"ಅಹಹ್ಹಾ! ಮರ್ಕಟ ವೀರನಿಗೆ ಅಟ್ಟಹಾಸ ತುಂಬಾ ಇರುವಂತಿರುವುದು"ಎಂದು ಕೇವಲವಾಗಿ ನುಡಿದ ಪಾರ್ಥಿವ.

ಅದಕ್ಕೆ ವಾಯುಸುತ "ಎಲ್ಲಯ್ಯಾ, ನಿನ್ನ ಬಾಣಗಳಿಂದ ಸೇತುವೆಯನ್ನು ನಿರ್ಮಿಸು ನೋಡುವಾ. ನಿಮಿಷದಲ್ಲಿ ಅದನ್ನು ಪಟಪಟನೆಂದು ಮುರಿದು ಸಮುದ್ರದಲ್ಲಿ ಹಾಕುತ್ತೇನೆ ನಾನೀ ಕೆಲಸ ಮಾಡದಿದ್ದರೆ ನಿನಗೆ ಆಜನ್ಮ ಪರ್ಯಂತ ದಾಸನಾಗಿರುವೆನು. ಇದು ನನ್ನ ಪ್ರತಿಜ್ಞೆ" ಎಂದು ಸವಾಲು ಹಾಕಿದ.

ಆಗ ಸವ್ಯಸಾಚಿ "ಈ ಮಾತು ಖಂಡಿತವೋ? ನಾನು ನನ್ನ ಪ್ರತಿಜ್ಞೆಯಿಂದ ದುರ್ಭೇದ್ಯವಾದ ಸೇತುವೆಯನ್ನು ನಿರ್ಮಿಸದಿದ್ದಪಕ್ಷಕ್ಕೆ ಆ ಕ್ಷಣವೇ ಅಗ್ನಿಪ್ರವೇಶಮಾಡುವೆನು. ಇದು ನನ್ನ ಶಪಥ" ಎಂದು ಮರುಪ್ರತಿಜ್ಞೆ ಮಾಡಿದ. ರಿವ್ವನೆ ಒಂದು ಬಾಣ ಬಿಟ್ಟು, ಅದರ ಹಿಂದೆ ಶರಪರಂಪರೆ ಸುರಿಸಿ ಅದ್ಭುತವಾದ ಸೇತುವೆ ನಿರ್ಮಿಸಿದ. ಆಂಜನೇಯನು ಸೇತುವೆಯನ್ನು ಸಮೀಪಿಸಿ,



ಕಿರುಬೆರಳಿನಿಂದ ಒಂದು ಸಾರಿ ಅದನ್ನು ಅದುಮಿ ನೋಡಿದ. ಅಷ್ಟಕ್ಕೇ ಆ ಸೇತುವೆ ಲಟಲಟನೆಂದು ಮುರಿದು ನೀರಿನಲ್ಲಿ ಸೇರಿ ಹೋಯಿತು.

ಅರ್ಜುನ ಆಶ್ಚರ್ಯ ಹೊಂದಿದ. 'ನನ್ನ ಬಾಣಗಳು, ನನ್ನ ಬಿಲ್ಲು ವಿದ್ಯಾಪ್ರಾವೀಣ್ಯತೆ ಇಷ್ಟೇಯೇ? ಇದೆಯೇ? ಛಿ" ಎಂದುಕೊಂಡು ಅಗ್ನಿಪ್ರವೇಶಮಾಡಲು ಸಿದ್ಧನಾದ.

ಇದನ್ನು ಕಂಡು ಮಾರುತಿ "ಅರ್ಜುನಾ, ಇನ್ನುಮುಂದೆ ಯಾವಾಗಲೂ ಇಂತಹ ಪಂಧ್ಯಗಳನ್ನು ಹಾಕದೆ ನಿನ್ನ ದಾರಿ ನೀನು ಹೋಗು. ಅಗ್ನಿಪ್ರವೇಶಮಾಡಲು ಈಗಿಲ್ಲಿ ಬೆಂಕಿ ಕೊಂಚವಾದರೂ ಸಿಗುವುದಿಲ್ಲ" ಎಂದು ಸಹಾನುಭೂತಿ... ತೋರಿಸುತ್ತಾ ನೋಡಿದ.

ಅರ್ಜುನ ಪೌರುಷದಿಂದ "ಪಾಂಡವರು ಅಸತ್ಯವಾದಿಗಳೂ, ಅಸಮರ್ಥರೂ ಎಂದು ತಿಳಿಯಬೇಡವಪ್ಪಾ ಆಂಜನೇಯ" ಎಂದು ಒಂದು ಬಾಣವನ್ನು ಅನುಸಂಧಾನಮಾಡಿ ನೆಲಕ್ಕೆ ಹೊಡೆದ. ಕೂಡಲೇ ಅಗ್ನಿಜ್ವಾಲೆಗಳು ಪ್ರಜ್ವಲಿಸಿದವು. 'ಹೇ ಕೃಷ್ಣಾ, ಕೃಷ್ಣಾ ಆಪದೋದ್ಧಾರಕ' ಎಂದು ಪ್ರಾರ್ಥನೆ ಮಾಡುತ್ತಾ ಆ ಜ್ವಾಲೆಯಲ್ಲಿ ಹಾರಲು ಸಿದ್ಧನಾದ. ಆಂಜನೇಯ ಎಷ್ಟು ಕೇಳಿಕೊಂಡರೂ ತನ್ನ ಹಠ ಬಿಡಲಿಲ್ಲ.

ಅಷ್ಟರಲ್ಲಿ ಒಬ್ಬ ವೃದ್ಧ ಬ್ರಾಹ್ಮಣನು ಅಲ್ಲಿಗೆ ಬಂದು "ನಿಲ್ಲು, ನಿಲ್ಲು. ಏನಿದು ದುರಂತ. ಆತ್ಮಹತ್ಯೆ ಮಾಡಿಕೊಳ್ಳುವುದು ಮಹಾಪಾಪವಲ್ಲವೇ" ಎಂದು ಅರ್ಜುನನನ್ನು ತಡೆದು ನಿಲ್ಲಿಸಿದ. ಆಗ ಆಂಜನೇಯನು ಬ್ರಾಹ್ಮಣನೊಂದಿಗೆ ನಡೆದ ವಿಷಯವನ್ನೆಲ್ಲಾ ಹೇಳಿ, ತಾವು ಮಾಡಿದ ಪ್ರತಿಜ್ಞೆಗಳ ವಿವರಗಳನ್ನು ಆತನಿಗೆ ತಿಳಿಸಿದ.

ಎಲ್ಲವನ್ನೂ ಕೇಳಿ ಆ ವಿಪ್ರ "ಚೆನ್ನಾಗಿಯೇ ಇದೆ. ಆದರೆ ಇಂಥ ವಿಷಯಗಳಲ್ಲಿ ಮಧ್ಯವರ್ತಿ ಇಲ್ಲದಿರುವುದು ಸರಿಯಾಗಿ ಕಾಣಿಸುವುದಿಲ್ಲ. ಸರಿ, ಈಗ ನಾನಿಲ್ಲಿ ಇದ್ದೇನಲ್ಲಾ. ಅರ್ಜುನಾ, ಎಲ್ಲಿ, ಈ ಸಾರಿ ನೀನು ನಿನ್ನ ಬಾಣಗಳ ಚಾತುರ್ಯದಿಂದ ಸೇತುವೆಯನ್ನು ಕಟ್ಟು. ಆಂಜನೇಯ, ನಡೆದು ಹೋದು

ದಕ್ಕೇನು ಬಿಡು. ಈಗ ಅರ್ಜುನ ಮತ್ತೆ ಸೇತುವೆ ಕಟ್ಟುತ್ತಾನೆ. ಅದನ್ನು ನಿನ್ನ ಭುಜ ಬಲದಿಂದ ಮುರಿ, ನೋಡೋಣ" ಎಂದು ಹೇಳಲು, ಅವರಿಬ್ಬರೂ ಆತನು ಮಧ್ಯವರ್ತಿಯಾಗಿರಲು ಒಪ್ಪಿಕೊಂಡರು.

ಇಮ್ಮಡಿ ಉತ್ಸಾಹದಿಂದ ಪಾರ್ಥನು ಬಾಣಗಳನ್ನು ಬಿಟ್ಟು ಸೇತುವೆ ನಿರ್ಮಿಸಿದ. ಹನುಮಂತ ಕುಣಿಯುತ್ತಾ ಹೋಗಿ ಮೊದಲಿನಂತೆ ಕಿರುಬೆರಳಿನಿಂದ ಅದುಮಲು ಹೋದ. ಸೇತುವೆ ಕದಲಲಿಲ್ಲ. ಜೋರಾಗಿ ಅದುಮಿದ; ಸರಿದಾಡಲಿಲ್ಲ. ಕಾಲಿನಿಂದ ತುಳಿದು ಏನೋ ಮಾಡಲು ಹೋದ; ಅದು ಅಲುಗಾಡಲಿಲ್ಲ. ಬಲವೆಲ್ಲಾ ಸೇರಿಸಿ ಕೊನೆಯಬಾರಿ ಪ್ರಯತ್ನ ಮಾಡಿ ನೋಡಿದ; ಸೇತುವೆ ಮಿಸುಕಾಡಲಿಲ್ಲ!

ಈ ಸೇತುವೆ ಸಾಧಾರಣವಾದ ಸೇತುವೆ ಅಲ್ಲವೆಂತಲೂ, ಬಂದ ಬ್ರಾಹ್ಮಣ ಸಾಮಾನ್ಯನಲ್ಲವೆಂತಲೂ ಕೂಡಲೇ ಗ್ರಹಿಸಿದ ಆಂಜನೇಯ. ಭಕ್ತಿಪರವಶನಾಗಿ ಹನುಮಂತ ಆ ವಿಪ್ರನಿಗೆ ನಮಸ್ಕಾರವನ್ನು ಮಾಡಿ "ರಾಮಾ, ಸುಗುಣಾಭಿರಾಮಾ, ನೀನು ನನ್ನನ್ನು ಈ ರೀತಿ ಪರೀಕ್ಷೆ ಮಾಡಲು ಬಂದಿರುವೆಯೆಂದು ನಾನು ತಿಳಿಯಲಾರೆನೆಂದು ಭಾವಿಸಿದೆಯಾ? ಸೇತುವೆಯಲ್ಲಿ ನಿನ್ನ ಮಹತ್ತರ ಶಕ್ತಿಯನ್ನು ಪ್ರವೇಶಿಸಿದ ಸಂಗತಿ ನಾನರಿಯೆನೆಂದು ತಿಳಿದೆಯಾ? ಎಷ್ಟು ದಿನಗಳನಂತರ ದರ್ಶನ ಏತ್ತೆ, ತಂದೆ! ಇಂದಿಗೆ ನನ್ನ ಮೇಲೆ ನಿನಗೆ ಕರುಣೆಬಂತೆ?



ಎಲ್ಲಿ, ನಿನ್ನ ಆ ದಿವ್ಯಮಂಗಳ ರೂಪವನ್ನು ಒಂದು ಸಾರಿ ತೋರಿಸಲಾರೆಯಾ?" ಎಂದು ಪಾದಗಳಮೇಲೆ ಬಿದ್ದು ಮೂರ್ಛೆಹೊಂದಿದ. ಆಗ ಆ ಬ್ರಾಹ್ಮಣ ಹನುಮಂತನನ್ನು ಪ್ರೀತಿಯಿಂದ ಎಬ್ಬಿಸಿದ. ಹನುಮಂತ ತಲೆಮೇಲೆತ್ತಿ ನೋಡಲು ಬ್ರಾಹ್ಮಣನು ಮಾಯವಾಗಿ ಆತನ ಸ್ಥಳದಲ್ಲಿ ತನ್ನ ಪ್ರಭುವಾದ ಶ್ರೀರಾಮಚಂದ್ರಮೂರ್ತಿ ಸಾಕ್ಷಾತ್ಕಾರ ಮಾಡಿದ್ದಾನೆ. "ಹನುಮಾ, ಅರ್ಜುನ ಹೊರಗಿನವನೆಂದು ತಿಳಿದೆಯಾ? ನೀವಿಬ್ಬರೂ ಸಮಬಲರು. ಒಬ್ಬರು ಹೆಚ್ಚು ಒಬ್ಬರು ಕಡಿಮೆ ಎಂಬ ಮಾತಿಲ್ಲ. ನೀವಿಬ್ಬರೂ ಪ್ರತಿಜ್ಞೆಗಳನ್ನು ಮಾಡಿದಿರೆಂದರೆ ಲೋಕಗಳು ನಡುಗುವುವು. ಆದ್ದರಿಂದ ನೀವು ಉಭಯರೂ ನಿಮ್ಮ ನಿಮ್ಮ

ಶಕ್ತಿಯನ್ನು ಲೋಕ ಹಿತಕ್ಕಾಗಿ ವಿನಿಯೋಗಿಸಬೇಕು. ಶೀಘ್ರದಲ್ಲಿಯೇ ಭಾರತ ಮಹಾಯುದ್ಧ ಬರುತ್ತದೆ. ಆ ಯುದ್ಧದಲ್ಲಿ ಮತ್ತೆ ನಾವೆಲ್ಲರೂ ಸೇರಿ ಕೆಲಸ ಮಾಡಬೇಕು. ಇಲ್ಲದಿದ್ದರೆ ನನ್ನ ಕರ್ತವ್ಯವನ್ನು ನಾನು ನೆರವೇರಿಸುವುದಾದರೂ ಹೇಗೆ? ಆದರೆ ಅದು ಹೇಗೆಂದು ಕೇಳಬಹುದು. ಆಗ ನಾನು ಕೃಷ್ಣನಾಗಿ ಯುದ್ಧರಂಗದಲ್ಲಿ ಪಾರ್ಥನಿಗೆ ಸಾರಥಿಯಾಗುವೆನು. ನೀನು ಅರ್ಜುನನ ರಥವನ್ನು ಅಲಂಕರಿಸುವ ಬಾವುಟದಮೇಲಿದ್ದು ವಿಜಯನಿಗೆ ದಿಗ್ವಿಜಯವನ್ನುಂಟು ಮಾಡುತ್ತಿರಬೇಕು ನಿನ್ನ ಸ್ವರೂಪ ಚಿತ್ರಿಸುವ ಆ ಪತಾಕೆ 'ಕಪಿಧ್ವಜ' ವೆಂಬ ಹೆಸರಿನಲ್ಲಿ ಬಳಕೆಯಲ್ಲಿ ಬರುತ್ತದೆ" ಎಂದ.

"ರಾಮಾ, ಮಹಾಪ್ರಸಾದ. ಧನ್ಯನಾದೆ" ಎಂದು ಕೈ ಕಟ್ಟಿಕೊಂಡು ನಿಂತುಕೊಂಡ ಹನುಮಂತ. ಆತನು ಕಣ್ಣುಮುಚ್ಚಿ ತೆರೆಯುವುದರೊಳಗಾಗಿ ಆ ಬ್ರಾಹ್ಮಣನು ಅದೃಶ್ಯನಾದ. ಆಗ ರಾಮ ನಾಮ ಸ್ಮರಣೆಮಾಡುತ್ತಾ ಹನುಮಂತ ಉದಯಾದ್ರಿಸೇರಿಕೊಂಡ.

ಆಂಜನೇಯನ ಚೇಷ್ಟೆಗಳನ್ನು ನೋಡುತ್ತಿದ್ದ ಅರ್ಜುನನಿಗೇನೂ ತಿಳಿಯಲಿಲ್ಲ. ಬ್ರಾಹ್ಮಣನು ನಿಂತಿದ್ದ ದಿಕ್ಕಿನಕಡೆ ನೋಡಲು, ವಿಪ್ರನ ಬದುಲು ತನ್ನ ಕೃಷ್ಣ ನಿಂತಿರುವನು. ಕೃಷ್ಣನು ಆತನನ್ನು ಹತ್ತಿರಕ್ಕೆಳೆದುಕೊಂಡು, "ಭಾವಾ, ಎದುರಾಳಿಯ ಬಲಾಬಲಗಳನ್ನು ತಿಳಿಯದೆ ಸವಾಲು ಏಕಪ್ಪಾ ಹಾಕುವೆ? ಆಂಜನೇಯನೆಂದರೆ ಸಾಮಾನ್ಯನೆಂದು ಎಣಿಸಿದೆಯಾ? ಆತನು ಮಹಾಭಕ್ತ. ನಿನ್ನಂತೆಯೇ ಅಜೇಯ. ಆದ್ದರಿಂದ ಜಾಗರೂಕತೆಯಿಂದಿರಬೇಕು. ಅಲ್ಲ, ಅವಸರಬಿದ್ದು. ಅಗ್ನಿಪ್ರವೇಶ ಮಾಡಹೊರಟೆಯಲ್ಲಾ, ಅದೆಂತಹ ಕೆಲಸಪ್ಪಾ, ಹೆಂಗಸರಂತೆ! ಮುಂದೆ ಬರಲಿದೆ ಮುದುಕರ ಹಬ್ಬ ಅಂದಹಾಗೆ ಅಸಲು ಭಾರತ ಯುದ್ಧವೆಲ್ಲಾ ಇನ್ನುಮೇಲೆತಾನೇ ಇದೆ. ಆ ಯುದ್ಧವನ್ನು ನಡೆಸಲೋಸುಗವೇ ಅಲ್ಲವೇ ನಾವಿಬ್ಬರೂ ಈಗ ಅವತಾರ ಮಾಡಿರುವುದು. ಎಲ್ಲಾ ಮರೆತು ಬಿಟ್ಟೆಯಾ?" ಎಂದು ಮೂದಲಿಸಿ, ಕಪಿಧ್ವಜವನ್ನು ಕುರಿತು ಸಣ್ಣ ಕಥೆ ಹೇಳಿದ.



## ಒಗಟುಗಳು

1. ನಡೆದು ಮುಂಜಾನೆ ನಾಲ್ಕು ಕಾಲ್ಗಳಿಂದ,
ನಡೆಯುತ್ತ ಮಧ್ಯಾಹ್ನ ಕಾಲೆರಡರಿಂದ,
ಚಲಿಸಿ ಸಂಜೆಯಲಿ ತಾ ಮೂರ್ಕಾಲ್ಗಳಿಂದ,
ಬಳೆದಳಿವ ನಿಂತಿಳೆಯೊಳಾರವನು ಕಂದ?
—ಪದ್ಮನಾಭಾಚಾರ್ಯ, ಬಳಕುಂಜೆ.

2. ತಣ್ಣನೆ ಸಣ್ಣಗೆ ಮೈಯುಳ್ಳವನೆ.
ಗೋಲಗುಲಗಂಜಿ ಕಣ್ಣವನೆ
ಕೆಸರು ಕಂಡರೆ ಕಾಲು ಕಿಸಿಯೋನೆ
ನಿನ್ನ ಹೆಸರೇನು?
—ಎಂ. ಟಿ. ಜಾನಕಿ.

3. ಬಿಳಿಬಂಡೆಗಳ ನಡುವಿನಲಿ
ಇಹ ಚಿಕ್ಕ ಬಿಲದಲ್ಲಿ
ಕುಳಿತಿಹುದು ಘಟಸರ್ಪ.
—ಕೆ ಕೆ. ಮೆನನ್.

4. ಹೊಟ್ಟೆ ಪಿಟ್ಟಗೆ, ಜುಟ್ಟು ನೆಟ್ಟಗೆ
—ಬಿ. ಎನ್. ಗೋಪಾಲರಾವ್.

5. ಜಟ್‌ಪಟ್ ಲೇಡಿಗೆ ಒಂದೇ ಕಣ್ಣು.
—ದಯಾನಂದ.

6. ನೀರಲ್ಲಿ ನೆನೆಯದ ತೆನೆಯಿರದ ಕಾಳು,
ಸೇರಿನಿಂದಳೆಯದ ಬೀಸಲಾರದ ಕಾಳು,
ದೇಶವಾರಿಸುವುದು ಹಣಕೊಂದು ಕಾಳು,
ಯಾರಿಗೆ ಗೊತ್ತಿಲ್ಲ ನಾರಿಯರ ಬಾಳು.
—ಸಂಗು.

7. ದೂರದಿ ನೋಡಲು ಚಿನ್ನ
ಹತ್ತಿರ ನೋಡಲು ರನ್ನ
ಮುಟ್ಟಿದರೆ ಬನ್ನಾ
ಇವನಾರು ಹೇಳು ಚಿನ್ನಾ.
—ಪಿ. ಸಿ. ಎಸ್. ರಾವ್

## ಮಳೆಬಂದು ಶಾಂತಿಸುಖವ್ಯಾತು

★

ಯೋಗಿನೇಗಿಲ ಹೊಲಕೆ
ಹೋಗಿ ತಾ ಕಾಯುತಿರೆ
ಬೇಗನಾಗಮಿಸಿ ಮಳೆ ಶಾಂತಿಸುಖವ್ಯಾತು
ಕಪ್ಪೆ ಹಾವುಗಳೆಲ್ಲ
ಸೆಪ್ಪಗಿನ ಮೊಗಮಾಡೆ
ದಪ್ಪಹನಿ ಮಳೆಬಂದು ಶಾಂತಿಸುಖವ್ಯಾತು
ವನದ ಲತೆ ವೃಕ್ಷಗಳು
ಇನಿಯ ಮಳೆಯನು ಕಾಯೆ
ಹನಿಯಾದ ಮಳೆಬಂದು ಶಾಂತಿಸುಖವ್ಯಾತು
ಮನೆಯ ಹಸು ಹೋರಿಗಳು
ಮನದಿ ಚಿಂತಿಸುತಿರಲು
ಮನವೊಲಿವ ಮಳೆಬಂದು ಶಾಂತಿಸುಖವ್ಯಾತು
ಧರೆಯ ಮೃಗ ಪಕ್ಷಿಗಳು
ಸಿರಿವರನ ಧ್ಯಾನಿಸಲು
ಪಿರಿದಾದ ಮಳೆಬಂದು ಶಾಂತಿಸುಖವ್ಯಾತು
ಬೇನೆ ಬೇಸರಿಕೆಗಳು
ಹಾನಿ ಮಾಡಲು ಜನಕೆ
ತಾನೆ ಮಳೆಬಂದಾಗ ಶಾಂತಿಸುಖವ್ಯಾತು
ನೆಲದಮೇಲಣ ಹುಲ್ಲು
ಕಲ್ಲಿನಾಪರಿ ಒಣಗೆ
ಗೆಲವಿನಾ ಮಳೆಬಂದು ಶಾಂತಿಸುಖವ್ಯಾತು
ಸುಖಜೀವಿ ಮಾನವರು
ಸೆಖೆಗೆ ಬಸವಳಿದಿರಲು
ಸಖನಾದ ಮಳೆಬಂದು ಶಾಂತಿಸುಖವ್ಯಾತು

—ಬಿ. ರಾಮಚಂದ್ರ ಭಟ್ಟ, ಮುಂಡಾಜೆ.




## ಬಣ್ಣಬಣ್ಣದ ನೀರು

ಇಂದ್ರಜಾಲಕನು ತನ್ನ ಹತ್ತಿರ ಸಮೀಪದಲ್ಲಿ ಮೇಜಿನ ಮೇಲೆ ಒಂದು ಗಾಜಿನಹೂಜಿ ತುಂಬಾ ನೀರು, ಏಳು ಸಣ್ಣ ಗ್ಲಾಸುಗಳನ್ನು ಇಟ್ಟುಕೊಂಡಿರುತ್ತಾನೆ. ಸ್ಟೇಜಿನ ಹಿಂದಿನ ಭಾಗದಲ್ಲಿ ಕರಿಯ ಪರದೆ ನೇತಾಡುತ್ತಿರುತ್ತದೆ. ಆ ಪರದೆ ಕಟ್ಟಿರುವ ಭಾಗ ಸ್ವಲ್ಪವೂ ಬೆಳಕಿಲ್ಲದೆ ಕತ್ತಲೆಯಾಗಿರುವುದು. ಆ ಸ್ಟೇಜಿನ ಮೇಲೆ ಮತ್ತೇನೂ ಇರುವುದಿಲ್ಲ. ಪ್ರೇಕ್ಷಕರು ಬೇಕಿದ್ದಲ್ಲಿ ಆ ಗ್ಲಾಸುಗಳನ್ನು ಸೋಪು ನೀರಿನಿಂದ ತೊಳೆದಿಡಬಹುದು.

ಇಂದ್ರಜಾಲಕ ಹೂಜಿಯಲ್ಲಿರುವ ನೀರನ್ನು ಒಂದು ಗ್ಲಾಸಿನಲ್ಲಿ ಹಾಕಿ 'ನಿಮಗೆ ಯಾವ ಬಣ್ಣ ಬೇಕು' ಎಂದು ಪ್ರೇಕ್ಷಕರನ್ನು ಕೇಳುವನು. ಕೆಂಪು ನೀರು ಬೇಕು ಎಂದು ಒಬ್ಬರು ಕೇಳಿದರೆಂದು ಭಾವಿಸಿ. ಆತನು ಆ ಲೋಟ ಮೇಲಕ್ಕೆತ್ತಿ ಸ್ವಲ್ಪಹೊತ್ತು ಅತ್ತಿತ್ತ ಕದಲಿಸಿದ ಕೂಡಲೇ ಅದು ಕೆಂಪು ನೀರಿನಂತೆ ಬದಲಾಯಿಸುವುದು. ಮತ್ತೊಬ್ಬರು ಹಸುರು ನೀರು ಬೇಕು ಎಂದು ಕೇಳಿದರೆಂದು ಇಟ್ಟುಕೊಳ್ಳುವ. ಮತ್ತೊಂದು ಲೋಟದಲ್ಲಿ ಹೂಜಿಯಲ್ಲಿದ್ದ ನೀರನ್ನು ಸುರಿದು ಆ ಗ್ಲಾಸನ್ನು ಮೇಲಕ್ಕೆತ್ತಿ ಮತ್ತೆ ತುಸ ಹೊತ್ತು ಅತ್ತಿತ್ತ ಕದಲಾಡಿಸಿದರೆ ಹಸುರು ನೀರಾಗಿ ಬದಲಾಯಿಸುವುದು. ಹಾಗೆ ಆ ಏಳು ಗ್ಲಾಸುಗಳಲ್ಲೂ ಮಾಮೂಲು ನೀರು ಹಾಕಿ ಏಳು ಬಣ್ಣಗಳ ನೀರಿನಂತೆ ಬದಲಾಯಿಸಬಹುದು.

ಆ ನೀರಿನಲ್ಲಿ ಇಂದ್ರಜಾಲಕ ಯಾವುದೋ ಪುಡಿ ಸೇರಿಸಿಯೋ, ಇಲ್ಲ ಮಾಯ ಮಂತ್ರವೋ ಮಾಡಿರಬಹುದೆಂದು ತಿಳಿಯಬಹುದು ನೀವು. ಆದರೆ ನಿಜ ವಿಷಯ ಅದಲ್ಲ. ಗುಟ್ಟೆಲ್ಲಾ ಇಲ್ಲಿದೆ.

ಸ್ಟೇಜಿನ ಮೇಲೆ ಇಂದ್ರಜಾಲಕನ ತಲೆಯ ಮೇಲ್ಭಾಗದಲ್ಲಿ ಅಡ್ಡವಾಗಿ ಒಂದು ದಾರ ಕಟ್ಟಿರುತ್ತದೆ. ಆ ದಾರಕ್ಕೆ

ಉದ್ದುದ್ದಕ್ಕೆ ಮೊಳದುದ್ದ ಏಳು ಬಣ್ಣದ ದಾರಗಳನ್ನು ಸ್ವಲ್ಪಸ್ವಲ್ಪ ದೂರದಲ್ಲಿ ಇಳಿಬಿಟ್ಟಿರುತ್ತದೆ. ಕೆಂಪು, ಹಳದಿ, ಎಳೆಹಸಿರು, ಆರೆಂಜ್, ವೈಲಟ್ ಮುಂತಾದ ದಾರಗಳನ್ನು ಕಟ್ಟಿರುವರೆಂದು ಭಾವಿಸಿ. ತಾನು ನಿಂತಿರುವ ಸ್ಥಳಕ್ಕೆ ಕೈಗಟಕಿಸುವಷ್ಟು ಸಮೀಪದಲ್ಲಿ ಪ್ರದರ್ಶನಕ್ಕೆ ಮೊದಲೇ ಕಟ್ಟಿ ಸಿದ್ಧ ಪಡಿಸಿಕೊಂಡಿರಬೇಕು. ಈ ದಾರಗಳು ಇಳಿ ಬಿಟ್ಟಿರುವ ಜಾಗ ಮಾತ್ರ ಪೂರ್ತಿ ಕತ್ತಲೆಯಾಗಿರಬೇಕು. ಇದು ತುಂಬಾ ಮುಖ್ಯವಾದ ವಿಷಯ. ಏಕೆಂದರೆ ಕತ್ತಲೆ ವೇಳೆಯಲ್ಲಿ ದಾರಗಳು ಪ್ರೇಕ್ಷಕರಿಗೆ ಕಾಣಿಸುವುದಿಲ್ಲ. ಈ ಯುಕ್ತಿ ರಾತ್ರಿ ಹೊತ್ತು ಮಾಡಲು ಮಾತ್ರ ಸಾಧ್ಯ.

ಪ್ರೇಕ್ಷಕರು ಇಂಥ ನೀರು ಬೇಕೆಂದು ಕೇಳಿದಾಗ ಇಂದ್ರಜಾಲಕ ಆ ಬಣ್ಣದ ದಾರವೆಷ್ಟುದೂರದಲ್ಲಿರುವುದೋ ಗುರುತಿಟ್ಟುಕೊಂಡು, ಆ ದಾರ ನೀರಿನೊಳಗೆ ಬರುವಂತೆ ಗ್ಲಾಸನ್ನು ಎತ್ತಿ ಹಿಡಿಯಬೇಕು. ಆ ನೀರೆಲ್ಲಾ ಆ ಬಣ್ಣದ ಹಾಗೇ ಬದಲಾಯಿಸುವುದು.

ಎಲ್ಲಕ್ಕಿಂತಲೂ ಮುಖ್ಯವಾದ ವಿಷಯವೊಂದು ನೀವು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಇಂದ್ರಜಾಲಕನು ಗ್ಲಾಸು ನೀರಿನಲ್ಲಿ ಏನೇನೋ ಅದ್ದುತ್ತಿರುವಂತೆ ಪ್ರೇಕ್ಷಕರು ಕಂಡು ಹಿಡಿಯದ ರೀತಿ ತುಂಬಾ ಚಾಲೂಕಾಗಿ, ಶೀಘ್ರವಾಗಿ ಮಾಡಬೇಕು. ಸ್ವಲ್ಪ ಅನುಭವದಿಂದ ಇದು ಮಾಡುವುದು ಸುಲಭವಾಗುವುದು. ಆದರೆ ಇದು ತುಂಬಾ ಸುಲಭವಾದ ಟ್ರಿಕ್ ಅಂತೆ ಕಂಡು ಬಂದರೂ, ಅತಿ ಕಷ್ಟಕರವಾದದ್ದು. ಇಂದ್ರಜಾಲಕ ಸ್ವಲ್ಪ ಅಜಾಗರೂಕತೆಯಿಂದಿದ್ದರೂ ಅಸಲಿಗೇ ಮೋಸವುಂಟಾಗುವ ಪರಿಸ್ಥಿತಿಯೊದಗಬಹುದು.




ಪಾಠಕರು ಈ ಗಾರುಡಿಯನ್ನು ಕುರಿತು ಇನ್ನೂ ವಿವರಗಳನ್ನು ತಿಳಿದುಕೊಳ್ಳಬೇಕೆಂದರೆ, ಅವರು 'ಚಂದಮಾಮದ' ಹೆಸರು ಸೂಚಿಸಿ, ಪ್ರೊಫೆಸರ್ ಸರ್ಕಾರ್‌ರವರಿಗೆ ನೇರವಾಗಿ ಬರೆಯಬಹುದು. ಪತ್ರ ಇಂಗ್ಲೀಷ್ ಭಾಷೆಯಲ್ಲಿರಬೇಕಾದುದು ಅಗತ್ಯ. ಅವರ ಪತ್ತೆ:

ಪ್ರೊಫೆಸರ್ ಪಿ. ಸಿ. ಸರ್ಕಾರ್,
ಮೆಜಿಷಿಯನ್
ಜಮಿರ್ ಲೇನ್, ಬಾಲಿಗಂಜ್
ಕಲಕತ್ತಾ-19

# 'ಬಣ್ಣ ಹಾಕಿ' ನಾಲ್ಕನೇ ಚಿತ್ರದ ಕಥೆ

ಮಹಲಿನಲ್ಲಿದ್ದ ಮಹಾನುಭಾವನ ಸಹಾಯ ದೊರಕುವ ಭರವಸೆಯಿಂದಲ್ಲವೆ ರಾಜಕುಮಾರ ಅಲ್ಲಿಗೆ ಬಂದುದು? ಆದರೆ ಈ ರೀತಿ ಮಹಡಿಗೆ ನೇತಾಡಲು ತಾನು ಮಾಡಿದ ಅಪಚಾರವೆಂತಹುದೋ ತಿಳಿಯದೆ ಬೇರೆ ವಿಧಿಯಿಲ್ಲದೆ ನೇತಾಡುತ್ತಾ ಕಾಲ ಕಳೆಯಲಾರಂಭಿಸಿದ. ದಿನಗಳು ಕಳೆದು.ವು ಆದರೊಂದು ವಿಚಿತ್ರ! ನಿದ್ರಾಹಾರಗಳಿಲ್ಲದೆ ಒಂದೇ ಸಮನೆ ಹಾಗೆ ನೇತಾಡುತ್ತಿದ್ದರೂ ಆತನಿಗೆ ತೊಂದರೆಯೆನಿಸಲಿಲ್ಲ. ಆಯಾಸವೂ ತೋರಲಿಲ್ಲ. ಇದರಿಂದ ರಾಜಕುಮಾರನ ಸಂತೋಷಕ್ಕೆ ಎಣೆಯೇ ಇಲ್ಲ. ಹೀಗೆ 29 ದಿನಗಳು ಕಳೆದುವು. 30 ನೇ ದಿನ ಮಹಾನುಭಾವನು ಕಣ್ಣು ತೆರೆದನು. ತನ್ನ ಮಾಯಾದಂಡವನ್ನು ಒಂದು ಸಲ ಆಡಿಸಿದನು. ತಕ್ಷಣವೇ ರಾಜಕುಮಾರನು ನೆಲಕ್ಕಿಳಿದು ಆತನ ಮುಂದೆ ನಮ್ರನಾಗಿ ನಿಂತನು. ಮಾಂತ್ರಿಕನು ಪ್ರಶ್ನಿಸಲಾಗಿ ಆತನು ತಾನು ಬಂದ ಕಾರ್ಯಕುರಿತು ಎಲ್ಲವನ್ನೂ ವಿವರಿಸಿದನು. ಆಗ ಮಾಂತ್ರಿಕನು ತನ್ನ ಮುಂದಿದ್ದ ತಲೆಬರುಡೆಯನ್ನು ದಂಡದಿಂದ ಮೂರುಸಲ ಮುಟ್ಟಿ 'ರಾಜಕುಮಾರನ ಪ್ರಶ್ನೆಗೆ ಸಮಾಧಾನ ಹೇಳು' ಎನ್ನಲು ಆ ಬರುಡೆ ಈ ರೀತಿ ಹೇಳಿತು. "ಇಲ್ಲಿಗೆ ಪಶ್ಚಿಮ ದಿಕ್ಕಿನಲ್ಲಿ ಹಲವು ಯೋಜನಗಳ ದೂರ ಹೋದರೆ ಒಂದು ಮರುಭೂಮಿಯಲ್ಲಿ ಬೋಳುಮರವೊಂದು ಕಾಣಿಸುವುದು. ಆ ಮರದ ಮೇಲೆ ವಾಸಿಸುತ್ತಿರುವ ಪಂಚವರ್ಣದ ಗಿಣಿಯನ್ನು ತಂದರೆ ನಿನ್ನ ಕೋರಿಕೆ ಸಿದ್ಧಿಸುವುದು" ಎಂದು ಹೇಳಿ ಸುಮ್ಮನಾಯಿತು. ಕೂಡಲೇ ರಾಜಕುಮಾರನು ಮಹಾನುಭಾವನ ಆಶೀರ್ವಾದ ಹೊಂದಿ ಗಿಣಿಯನ್ನು ಅರಸುತ್ತಾ ಹೊರಟು ಆ ಜಾಗವನ್ನು ಸೇರಿಕೊಂಡನು. ಆದರೆ ಆ ಮರದ ಮೇಲೆ ಆತನಿಗೆ ಕಾಣಿಸಿದುದು ಪಂಚರಂಗಿನ ಗಿಣಿಯಲ್ಲ; ಬಿಳಿಯಗಿಣಿ. ಅಲ್ಲದೆ ಆ ವೃಕ್ಷವನ್ನು ಸುತ್ತುಗಟ್ಟಿ ಒಂದು ಭಯಂಕರ ಸರ್ಪವು ಬುಸುಗುಟ್ಟುತ್ತಿದೆ. ಆ 'ಬೋಳು ಮರ' ಕುರಿತು ಬರುಡೆ ಹೇಳಿದ ಮಾತುಗಳಲ್ಲಿ ಈ ಸರ್ಪದ ವಿಷಯವೇ ಇಲ್ಲ. ಇದೆಲ್ಲವನ್ನೂ ನೋಡಿ ರಾಜಕುಮಾರನಿಗೆ ಆ ರುಂಡವು ಹೇಳಿದ ವೃಕ್ಷ ಇದೇಯೇ? ಅಲ್ಲವೇ, ಎಂಬುದಾಗಿ ಸಂದೇಹ ತಲೆದೋರಿತು. ರಾಜಕುಮಾರ ಸುತ್ತಲೂ ದೃಷ್ಟಿಸಿ ನೋಡಿದನು. ಆ ಬ್ರಹಾಂಡವಾದ ಮರುಭೂಮಿಯಲ್ಲಿ ಎಷ್ಟುದೂರ ನೋಡಿದರೂ ಒಂದು ಮೋಟು ಮರವೂ ಕಾಣಿಸಲಿಲ್ಲ. ಏನು ಮಾಡಲೂ ತೋರದೆ ಯೋಚಿಸುತ್ತಾ ರಾಜಕುಮಾರನು ಅಲ್ಲೇ ಮತ್ತೆರಡು ದಿನಗಳನ್ನು ಕಳೆದನು. ಆಗ ಆತನಿಗೊಂದು ವಿಚಿತ್ರ ಕಂಡಿತು. ಮೊದಲು ಬೆಳ್ಳಗಿದ್ದ ಗಿಣಿಯು ಮರುದಿನ ಕರ್ರಗೂ, ಅದರ ಮರುದಿನ ಕೆಂಪಗೂ ಬದಲಾಗಿ ನಾಲ್ಕನೆಯ ದಿನ ಪಂಚವರ್ಣಕ್ಕೂ ತಿರುಗಿತು. ನಿರಾಶನಾಗಿದ್ದ ಕುಮಾರನಿಗೆ ಇದನ್ನು ಕಂಡು ಉತ್ಸಾಹ ಬಂದಿತು. ಆ ಸರ್ಪವನ್ನು ಹೇಗಾದರೂ ಕೊಂದು ಆ ಗಿಣಿಯನ್ನು ಹಿಡಿಯಲೇ ಬೇಕೆಂದು ಆತನು ನಿರ್ಧರಿಸಿದನು.




ಬಣ್ಣಹಾಕಿರಿ (ಕಥೆ) 5-ನೆ ಬೊಂಬೆ

# ಮುಖಚಿತ್ರ

ನರಕನೆಂಬ ರಾಕ್ಷಸನು ಕೃಷ್ಣನಮೇಲೆ ವೈರ ಬೆಳೆಸಿದ ವಿಷಯ ನಾವು ಈಮೊದಲೇ ತಿಳಿದು ಕೊಂಡಿರುವೆವು. ಅವನು ತನ್ನ ಸೇಡು ತೀರಿಸಿಕೊಳ್ಳಲು ಹೋಗಿ, ಶ್ರೀಕೃಷ್ಣನ ಕೈಯಲ್ಲಿ ಹತನಾದನು. ನರಕನು ಸತ್ತುಹೋದ ಕೂಡಲೇ ಅವನ ಆಪ್ತ ಸ್ನೇಹಿತನೂ, ಸುಗ್ರೀವನ ಮಂತ್ರಿಯೂ ಆದ ದ್ವಿವಿದನೆಂಬ ವಾನರನಿಗೆ ಕೋಪಬಂತು. ಕೃಷ್ಣ ಬಲರಾಮರನ್ನು ಹೇಗಾದರೂ ಕೊಂದು ನರಕನ ಋಣ ತೀರಿಸಿಕೊಳ್ಳಲೇಬೇಕೆಂದು ಅವನು ನಿರ್ಧರಿಸಿದನು. ಈ ಕೆಟ್ಟ ಯೋಚನೆ ಜನಿಸಿದ ಕೂಡಲೇ ತನ್ನ ಬಳಗವನ್ನು ಸಂಗಡ ಕರೆದುಕೊಂಡು ಹೋಗಿ ಉಪದ್ರವಗಳಿಂದ ದೇಶವನ್ನು ನಾಶಪಡಿಸಲು ನಿಶ್ಚಯಿಸಿದನು. ಆ ರಾಕ್ಷಸನ ಸಂಗಡಿಗರು ಪಟ್ಟಣಗಳಮೇಲೆ, ಗ್ರಾಮಗಳಮೇಲೆ ಬಿದ್ದರು. ಬೆಂಕಿ ಹಚ್ಚಿದರು. ಬೆಟ್ಟಗಳನ್ನು ತಂದು ಎಸೆದರು. ಸಮುದ್ರಗಳಲ್ಲಿಯ ನೀರನ್ನು ಮೇಲಕ್ಕೆ ಹಾರಿಸಿ ದೇಶಗಳನ್ನು ಮುಳುಗಿಸಿದರು. ಮಹರ್ಷಿಗಳ ಆಶ್ರಮಗಳಲ್ಲಿದ್ದ ಯಜ್ಞವೇದಿಕೆಗಳನ್ನು ಮೈಲಿಗೆ ಮಾಡಿ, ಹೋಮಕುಂಡಗಳನ್ನು ತಣ್ಣಗೆ ಮಾಡಿದರು. ಸ್ತ್ರೀಯರನ್ನು ಗುಹೆಗಳಲ್ಲಿ ಬಂಧಿಸಿದರು. ನಿಂದಿಸಿದರು.

ಹೀಗಿರಲು ಒಂದು ದಿನ ದ್ವಿವಿದನಿಗೆ ರೈವತ ಪರ್ವತದಕಡೆಯಿಂದ ಇಂಪಾದ ಸಂಗೀತ ಕೇಳಿಸಿತು. ಕೂಡಲೇ ಅತ್ತಕಡೆ ಹೋಗಿ ನೋಡಲು ಪ್ರೇಯಸಿಯರ ಮಧ್ಯೆ ಸಂಗೀತ ಹಾಡುತ್ತಿದ್ದ ಬಲದೇವ ಕಾಣಿಸಿದ. ದ್ವಿವಿದನು ಒಂದು ಮರ ಹತ್ತಿ ಕುಳಿತು, ಕೊಂಬೆಗಳನ್ನು ಅಲ್ಲಾಡಿಸುತ್ತಾ ಕಿಲಕಿಲನೆ ನಕ್ಕನು. ಬಲರಾಮನ ಪ್ರೇಯಸಿಯರು ಆತನನ್ನು ನೋಡಿ ಅಪಹಾಸ್ಯ ಮಾಡಿದರು. ಆಗ ಅವನು ಬಲರಾಮನಿಗೆ ಕಾಣುವಂತೆ ಅವರನ್ನು ಅಣಕಿಸಿದ. ಇನ್ನೂ ಎಷ್ಟೆಷ್ಟೋ ತುಂಟತನಗಳನ್ನು ಮಾಡಿದ.

ಬಲರಾಮನು ಕುಪಿತನಾಗಿ ಒಂದು ದೊಡ್ಡ ಬಂಡೆಯನ್ನು ಅವನಕಡೆ ಎಸೆದ. ವಾನರನು ಅದನ್ನು ತಪ್ಪಿಸಿಕೊಂಡು ಬಲರಾಮನ ಮಧುಕಲಶವನ್ನು ಒಡೆದುಹಾಕಿದ. ಹೆಂಗಸರ ಸೀರೆಯನ್ನು ಹರಿದು ಹಾಕಿದ. ಬಲರಾಮನು ಉಗ್ರನಾಗಿ ಹಲಾಯುಧ ಮತ್ತು ಮುಸಲವನ್ನು ಕೈಯಲ್ಲಿ ಹಿಡಿದು, ಯುದ್ಧಕ್ಕೆ ಸಿದ್ಧನಾದ. ಇದನ್ನು ನೋಡಿ ವಾನರನು ಒಂದು ದೊಡ್ಡ ಮರವನ್ನು ಕಿತ್ತು ಬಲರಾಮನಮೇಲೆಸೆದ. ಬಲರಾಮನು ಅದನ್ನು ತಪ್ಪಿಸಿಕೊಂಡು ಮುಸಲವನ್ನು ಎಸೆಯಲು ಅದು ವಾನರನ ತಲೆಗೆ ಬಿದ್ದು ಅವನ ಮಿದುಳು ಕೆಟ್ಟುಹೋಯಿತು. ಆ ಹೊಡೆತದಿಂದ ರಕ್ತ ಪ್ರವಾಹವೇ ಹರಿಯಿತು. ತರುವಾಯ ಉಭಯರ ನಡುವೆ ವೃಕ್ಷಗಳಿಂದಲೂ, ಶಿಲೆಗಳಿಂದಲೂ ಭಾರಿ ಕಾಳಗ ನಡೆಯಿತು. ಕೊನೆಗೆ ವಾನರನು ಎರಡು ಮುಷ್ಟಿಗಳನ್ನು ಸೇರಿಸಿ ಬಲರಾಮನ ಎದೆಯಮೇಲೆ ಹೊಡೆಯಲು, ಆತನು ರೋಷಪೂರಿತನಾಗಿ, ರಕ್ತವನ್ನು ಕಕ್ಕುವಂತೆ ದ್ವಿವಿದನ ಕತ್ತು ಕಿವುಚಿ ಕೊಂದು, ಲೋಕವನ್ನು ಅವನ ಪೀಡೆಯಿಂದ ಪಾರುಮಾಡಿದ.

---

ಒಗಟುಗಳ—ಉತ್ತರ :

1. ಮನುಷ್ಯ. 2. ಕಪ್ಪೆ. 3. ನಾಲಿಗೆ. 4. ತೆಂಗಿನಕಾಯಿ. 5. ಸೂಜಿ. 6. ಮುತ್ತು. 7. ಬೆಂಕಿ.

Controlling Editor : SRI CHAKRAPANI
Printed and Published by B. NAGI REDDI, at the B. N. K. Press, Madras - 1

